ಎಂ.ಫಿಲ್. ಪದವಿಯ ಸಂಪ್ರಬಂಧ

# ಸ್ತ್ರೀವಾದದ ಹಿನ್ನೆಲೆಯಲ್ಲಿ ಪ್ರತಿಭಾ ನಂದಕುಮಾರ್ ಕಾವ್ಯದ ಅಧ್ಯಯನ


ಸಂಶೋಧನ ವಿದ್ಯಾರ್ಥಿ

**ಗಾಯತ್ರಿ ಎಸ್.ಜಿ.**

ಮಾರ್ಗದರ್ಶಕರು

ಡಾ॥ ಕೃಷ್ಣಪರಮೇಶ್ವರ ಭಟ್






ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು,

ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ

ಮೂಲಕ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಲ್ಲಿಸಿದ ಸಂಪ್ರಬಂಧ

**2007**

ಎಂ.ಫಿಲ್.ಪದವಿಯ ಸಂಪ್ರಬಂಧ

# ಸ್ತ್ರೀವಾದದ ಹಿನ್ನೆಲೆಯಲ್ಲಿ ಪ್ರತಿಭಾನಂದಕುಮಾರ್ ಕಾವ್ಯದ ಅಧ್ಯಯನ

ಸಂಶೋಧನ ವಿದ್ಯಾರ್ಥಿ

**ಗಾಯತ್ರಿ ಎಸ್.ಜಿ.**

ಮಾರ್ಗದರ್ಶಕರು

**ಡಾ॥ ಕೃಷ್ಣಪರಮೇಶ್ವರ ಭಟ್**

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರು,
ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರದ
ಮೂಲಕ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಸಂಪ್ರಬಂಧ
2007

# ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ 2006–07ನೇ ಸಾಲಿನ ಎಂ.ಫಿಲ್. ಪದವಿಗಾಗಿ **ಸ್ತ್ರೀವಾದದ ಹಿನ್ನೆಲೆಯಲ್ಲಿ ಪ್ರತಿಭಾ ನಂದಕುಮಾರ್ ಕಾವ್ಯ** ಸಂಪ್ರಬಂಧವನ್ನು **ಡಾ॥ ಕೃಷ್ಣಪರಮೇಶ್ವರ ಭಟ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸಹಿ

ದಿನಾಂಕ: 04–08–2007

ಸ್ಥಳ : ಬೆಂಗಳೂರು

ಗಾಯತ್ರಿ ಎಸ್.ಜಿ.

**(ಗಾಯತ್ರಿ ಎಸ್.ಜಿ.)**

## ಮಾರ್ಗದರ್ಶಕರ ಪ್ರಮಾಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ 2006–07ನೇ ಸಾಲಿನ ಎಂ.ಫಿಲ್. ಪದವಿಗಾಗಿ **ಸ್ತ್ರೀವಾದದ ಹಿನ್ನೆಲೆಯಲ್ಲಿ ಪ್ರತಿಭಾ ನಂದಕುಮಾರ್ ಕಾವ್ಯ** ಎಂಬ ಸಂಪ್ರಬಂಧವನ್ನು **ಶ್ರೀಮತಿ ಗಾಯತ್ರಿ ಎಸ್.ಜಿ.** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸಹಿ

ದಿನಾಂಕ: 04–08–2007

ಸ್ಥಳ : ಬೆಂಗಳೂರು

**(ಡಾ॥ ಕೃಷ್ಣಪರಮೇಶ್ವರ ಭಟ್)**

# ಪರಿವಿಡಿ

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಪಶ್ಚಿಮದಲ್ಲಿ ಹದಿನೆಂಟನೆಯ ಶತಮಾನದ ಕೊನೆಯ ಭಾಗದಲ್ಲಿ ಮಾನವ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನಗಳ ಬಗ್ಗೆ ಪ್ರಶ್ನೆಗಳನ್ನು ಮೊದಲು ಎತ್ತಲಾಯಿತು. ವರ್ಜೀನಿಯಾ ವುಲ್ಫ್, ಸಿಮೋನ್ ದ ಬೋವಾ, ಮೇರಿ ಎಲ್‌ಮನ್, ಶುಲಾಮಿತ್ ಫೈರ್‌ಸ್ಟೋನ್ ಮುಂತಾದವರು ನಿಯಂತ್ರಿಸುತ್ತಿರುವುದರ ಹಿಂದಿನ ರಾಜಕೀಯದ ಹುನ್ನಾರಗಳನ್ನು ಶೋಧಿಸಲು ಯತ್ನಿಸಿದರು.

ಹೀಗೆ ಪಶ್ಚಿಮದಲ್ಲಿ ಆರಂಭವಾದ ಸ್ತ್ರೀವಾದಿ ಚಿಂತನೆ ಭಾರತದಲ್ಲಿ ಆಂಗ್ಲ ವಿದ್ಯಾಭ್ಯಾಸ ಹಾಗೂ ಸುಧಾರಣಾ ಚಳುವಳಿಗಳ ಪ್ರಭಾವದಿಂದ ಮಹಿಳೆಯರಲ್ಲಿ ಜಾಗೃತಿ ಮೂಡಿಸಿತು. ಅನೇಕ ಮಹಿಳೆಯರು ವಿದೇಶಗಳಿಗೆ ತೆರಳಿ ಮಹಿಳೆಯರ ಹಕ್ಕುಗಳ ಬಗೆಗಿನ ಅಧ್ಯಯನವನ್ನೂ ನಡೆಸಿದರು. ಹತ್ತೊಂಭತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಪಶ್ಚಿಮದಲ್ಲಿ ಚಳುವಳಿಯ ರೂಪದಲ್ಲಿ ಪ್ರಾರಂಭವಾದ ಸ್ತ್ರೀವಾದವು ಇಪ್ಪತ್ತನೆಯ ಶತಮಾನದಲ್ಲಿ ಭಾರತದಲ್ಲಿ ಹೆಚ್ಚು ಚಲಾವಣೆಗೆ ಬಂದಿತು.

ಕನ್ನಡಲ್ಲಿ ಸ್ತ್ರೀವಾದಿ ಚಿಂತನೆಯು ಸಾಹಿತ್ಯದಲ್ಲಿ ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಕಾಣಿಸಿಕೊಂಡಿತೆನ್ನಬಹುದು. ಈ ಅವಧಿಗೆ ಮುನ್ನ ಮಹಿಳೆಯರು ತಮ್ಮ ಕೃತಿಗಳಲ್ಲಿ ಪುರುಷನಿರ್ಮಿತ ಮೌಲ್ಯ ವ್ಯವಸ್ಥೆಯನ್ನು ಒಪ್ಪಿಕೊಂಡೇ ತಮ್ಮ ಅನುಭವಗಳನ್ನು ದಾಖಲಿಸುತ್ತಿದ್ದರು. ನವ್ಯೋತ್ತರ ಘಟ್ಟದಲ್ಲಿ ಹೊಸ ಪೀಳಿಗೆಯ ಅನೇಕ ಲೇಖಕಿಯರು ಕಾವ್ಯವನ್ನು ತಮ್ಮ ಪ್ರಧಾನ ಅಭಿವ್ಯಕ್ತಿ ಮಾರ್ಗವನ್ನಾಗಿ ಮಾಡಿಕೊಂಡರು. ಈ ಕಾವ್ಯವು ಪ್ರಮುಖವಾಗಿ ಸಮಾಜದ ಒಪ್ಪಿತ ವ್ಯವಸ್ಥೆಯ ವೈರುಧ್ಯಗಳನ್ನು ಹಾಗೂ ಸಂಪ್ರದಾಯಗಳನ್ನು ಪ್ರತಿಭಟಿಸುವ ಮಾರ್ಗವಾಯಿತೆನ್ನಬಹುದು.

ಕಾವ್ಯವನ್ನು ಹೀಗೆ ಆಯ್ದುಕೊಳ್ಳು ಅವರಿಗೆ ಹಲವು ಕಾರಣಗಳಿದ್ದುದ್ದನ್ನು ಗುರುತಿಸಬಹುದು. ಕನ್ನಡದ ಮಹಿಳಾ ಕವಿಗಳ ಎದುರಿಗೆ ಅಂದು ನವ್ಯ ಕವಿತೆಗಳು ಇದ್ದವು. ಈ ಕವಿತೆಗಳಲ್ಲಿ ಬಳಸಲಾಗಿದ್ದ ತಾಂತ್ರಿಕ ಅಂಶಗಳು ಆಕರ್ಷಕವಾಗಿದ್ದವು. ಏಕೆಂದರೆ ಇವು ಅನುಭವಗಳನ್ನು ವ್ಯಂಗ್ಯ, ಕಟಕಿ, ಆತ್ಮ ವಿಮರ್ಶೆಯ ರೂಪದಲ್ಲಿ ವ್ಯಕ್ತಪಡಿಸಲು ಸಮರ್ಥವಾಗಿದ್ದವು. ಸಂಕೇತ, ರೂಪಕಗಳ ಬಳಕೆಗೂ ಹೆಚ್ಚು ಅವಕಾಶವಿದ್ದುದ್ದರಿಂದ ಕಾವ್ಯವೇ ಕಥೆ ಕಾದಂಬರಿಗಳಿಗಿಂತ ಅನುಕೂಲಕರವಾಗಿ ಕಂಡಿರುವ ಸಾಧ್ಯತೆ ಇದೆ.

ಕನ್ನಡದ ಆರಂಭದ ಮಹಿಳಾ ಕಾವ್ಯವು ಹೆಣ್ಣಿನ ಅಂತರಂಗದ ನೋವಿನ, ನಿಟ್ಟುಸಿರಿನ, ಅಸಹಾಯಕತೆಯ ಅಭಿವ್ಯಕ್ತಿಯಾಗಿರುವುದನ್ನು ಕಾಣಬಹುದು. ಇಂತಹ ಅಭಿವ್ಯಕ್ತಿಯು ಸ್ವಗತ, ಕನಸುಗಾರಿಕೆ, ಗೆಳತಿಯರಿಗೆ ನಿವೇದನೆ, ಆತ್ಮಕಥನದಂತಹ ಮಾರ್ಗಗಳನ್ನು ಅನುಸರಿಸಿವೆ.

ಪ್ರಣಯ, ವಿರಹ, ದಾಂಪತ್ಯಗಳಂತಹ ವಸ್ತುಗಳು ಆಧುನಿಕ ಮಹಿಳಾ ಕಾವ್ಯದ ಪ್ರಧಾನ ವಸ್ತುಗಳೆನಿಸಿವೆ. ಇವುಗಳೊಂದಿಗೆ ಇರಡು ತಲೆಮಾರುಗಳ ಮುಖಾಮುಖಿಯನ್ನು, ಪುರಾಣ, ಮಹಾಕಾವ್ಯಗಳ ಸ್ತ್ರೀವಾದರಿಗಳೊಂದಿಗೆ ವಾಗ್ವಾದದ ವಸ್ತುಗಳನ್ನೂ ಸಹ ಕಾಣಬಹುದು. ಪುರುಷ ಲೋಕದ ನಯವಂಚನೆಗಳನ್ನು ಸ್ವತಃ ಪುರುಷರೂ ಒಪ್ಪಿಕೊಳ್ಳಬೇಕಾದ ತರ್ಕಬದ್ಧ ರೀತಿಯಲ್ಲಿ ತಮ್ಮ ಕವಿತೆಗಳಲ್ಲಿ ಬಯಲಿಗೆಳೆಯುತ್ತಾರೆ. ಕೆಲವು ಕವಿಗಳು ಹೆಣ್ಣಿನ ಲೈಂಗಿಕತೆಯ ಮೇಲಿನ ನಿರ್ಬಂಧಗಳನ್ನು ಹೇಳುವಂತಹ ಪದ್ಯಗಳನ್ನು ರಚಿಸಿದ್ದಾರೆ.

ಪ್ರತಿಭಾ ನಂದಕುಮಾರ್ ಹೊಸ ತಲೆಮಾರಿನ ಕವಿಯಾಗಿದ್ದು, ಪುರುಷ ಜಗತ್ತಿನ ಸ್ವಾರ್ಥಕೇಂದ್ರಿತ ನಯವಂಚನೆ, ಅಜ್ಞಾನ, ನಾಚಿಕೆಗೇಡಿತನ, ತೋರಿಕೆಯ ದಾಂಪತ್ಯ, ಹೆಣ್ಣಿನ ಅಂತರಂಗದ ಬೇಗುದಿಗಳು, ಗಂಡು ಹೆಣ್ಣಿನ ಸಂಬಂಧದ ಬಗ್ಗೆ ಹೊರಜಗತ್ತಿನ ರಾಕ್ಷಸೀಕುತೂಹಲ ಮುಂತಾದವನ್ನು ತಮ್ಮ ಕವಿತೆಗಳಲ್ಲಿ ಪರಿಣಾಮಕಾರಿಯಾಗಿ ನಿರೂಪಿಸಿದ್ದಾರೆ. ಹೆಣ್ಣನ್ನು ಕೇವಲ ಹೆಣ್ಣಾಗಿ ಪರಿಭಾವಿಸಿದಾಗ ಇತರ ಸಂಬಂಧಗಳು ಯಾವ ಅರ್ಥಗಳನ್ನು ಪಡೆದುಕೊಳ್ಳುತ್ತವೆ ಎಂಬುದನ್ನು ಇವರ ಕವಿತೆಗಳು ನಿರೂಪಿಸುತ್ತವೆ.

ಹೊಸ ಪ್ರಯೋಗಗಳ ದೃಷ್ಟಿಯಿಂದ ಕೂಡ ಪ್ರತಿಭಾನಂದಕುಮಾರ್ ರವರ ಕವಿತೆಗಳು ಮುಖ್ಯವಾಗುತ್ತವೆ. ಇಲ್ಲಿ ಹೆಣ್ಣಿನ ಬದುಕಿನ ಆಧುನಿಕ ವಿದ್ಯಮಾನಗಳೂ ಸ್ತ್ರೀವಾದಿ ನೆಲೆಯಲ್ಲಿ ಆಲೋಚನೆಗೊಳಪಟ್ಟಿವೆ. ಪುರುಷ ಜಗತ್ತಿನ ವಿರೋಧಾಭಾಸಗಳು ಮತ್ತು ಪುರುಷ ವಿಮರ್ಶೆಯ ಏಕಪಕ್ಷೀಯ ದೃಷ್ಟಿಗಳನ್ನು ಕುರಿತಂತೆ ತಮ್ಮ ಕವಿತೆಗಳ ಮೂಲಕವೇ ಉತ್ತರ ನೀಡುವ ಜಾಣತನವನ್ನು ತೋರಿದ್ದಾರೆ.

ಸಮಕಾಲೀನ ಮಹಿಳಾಕಾವ್ಯದಲ್ಲಿ ಭಿನ್ನವಾಗಿ ಕಾಣುವ ಪ್ರತಿಭಾ ಅವರ ಕಾವ್ಯವನ್ನು ಸ್ತ್ರೀವಾದಿ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವುದು ಈ ನಿಬಂಧದ ಉದ್ದೇಶವಾಗಿದೆ.

ಈ ಅಧ್ಯಯನದ ಪ್ರಾರಂಭದಲ್ಲಿ ಸ್ತ್ರೀವಾದದ ಪ್ರಮುಖ ಆಶಯಗಳನ್ನು ಕುರಿತು ವಿವೇಚನೆ ನಡೆಸಿರುವ ಒಂದು ಅಧ್ಯಯನವನ್ನು ರೂಪಿಸಲಾಗಿದೆ. ಮುಂದಿನ ಅಧ್ಯಾಯಗಳಲ್ಲಿ ಪ್ರತಿಭಾ ಅವರ 'ಮುನ್ನುಡಿ ಬೆನ್ನುಡಿಗಳ ನಡುವೆ' ಎಂಬ ಸಮಗ್ರ ಕಾವ್ಯದಲ್ಲಿರುವ ಕೆಲವು ಪ್ರಾತಿನಿಧಿಕ ಕವಿತೆಗಳ ಸ್ವರೂಪವನ್ನು ಸ್ತ್ರೀವಾದಿ ವಿಮರ್ಶೆಯ ಹಿನ್ನೆಲೆಯಲ್ಲಿ ವಿವೇಚಿಸಲಾಗಿದೆ. ಇದರೊಂದಿಗೆ ಪ್ರತಿಭಾ ಅವರ ಕಾವ್ಯದ ಅಭಿವ್ಯಕ್ತಿ ವಿಧಾನವನ್ನು ಚರ್ಚಿಸಲಾಗಿದೆ. ಅಲ್ಲದೆ ಸಮಕಾಲೀನ ಮಹಿಳಾ ಕವಿಗಳ ಕಾವ್ಯದೊಂದಿಗೆ ಪ್ರತಿಭಾ ಕಾವ್ಯದ ತೌಲನಿಕ ನೋಟವಿರುವ ಒಂದು ಅಧ್ಯಾಯವನ್ನು ರೂಪಿಸಿಕೊಳ್ಳಲಾಗಿದೆ.

## ಅಧ್ಯಾಯ-1

# ಸ್ತ್ರೀವಾದದ ಆಶಯಗಳು

### ಸ್ತ್ರೀವಾದ:-

ಸ್ತ್ರೀವಾದವು ಪಶ್ಚಿಮದಲ್ಲಿ ಆರಂಭವಾದ ಸಾಮಾಜಿಕ ಚಳುವಳಿ. ಮಹಿಳಾ ವಿಮೋಚನೆಯೇ ಮುಖ್ಯ ಗುರಿಯಾಗಿರುವ ಈ ಚಳುವಳಿಯು ಹಲವಾರು ತಾತ್ತ್ವಿಕ ಚಿಂತನೆಗಳನ್ನು ಮರು ಅಧ್ಯಯನಕ್ಕೊಳಪಡಿಸಿ, ಸ್ತ್ರೀಯರ ಹಕ್ಕುಗಳು, ಸ್ಥಾನಮಾನಗಳನ್ನು ವಂಚನೆಯಿಂದ ಪುರುಷಕೇಂದ್ರಿತ ಚಿಂತನೆಗಳು ಹೇಗೆ ಅವುಗಳು ಮಹಿಳೆಗೆ ದಕ್ಕದಂತೆ ಮಾಡಿವೆ ಎಂಬುದನ್ನು ವಿವರಿಸಿದೆ.

ಹೆಣ್ಣನ್ನು ಸಾಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಹತೋಟಿಯಲ್ಲಿಟ್ಟುಕೊಂಡಿರುವ ಪುರುಷ ಪ್ರಧಾನ ವ್ಯವಸ್ಥೆಯು ನಿರ್ಮಿಸಿರುವ ಸಾಂಸ್ಕೃತಿಕ ಸಂದರ್ಭದಲ್ಲಿ ಹೆಣ್ಣು ಅನೇಕ ಬಗೆಯ ಶೋಷಣೆಗಳನ್ನು ಅನುಭವಿಸಿದ್ದರ ಬಗೆಗೆ ದನಿಯೆತ್ತಿದ ಸ್ತ್ರೀವಾದಿ ಚಿಂತಕಿಯರು ಹಲವು ವಿಧಾನಗಳ ಮೂಲಕ ತಮ್ಮ ಹಕ್ಕುಗಳ, ತಮ್ಮತನದ ಶೋಧವನ್ನು ನಡೆಸಿದರು.

ಭಾರತದಲ್ಲಿ ಪಶ್ಚಿಮದ ಸ್ತ್ರೀವಾದಿ ಚಿಂತನೆಯ ಪ್ರಭಾವ ಕೂಡ ಬಹಳ ದಟ್ಟವಾಗಿಯೇ ಇದೆಯಾದರೂ ಪ್ರಾರಂಭಿಕ ಹಂತದಲ್ಲಿ ಈ ಚಳುವಳಿ ತನ್ನ ಗುರಿ, ಉದ್ದೇಶಗಳ ಬಗೆಗೆ ಸ್ಪಷ್ಟ ನಿಲುವನ್ನು ಹೊಂದಿರಲಿಲ್ಲ. ಸ್ತ್ರೀಯರನ್ನು ತೀವ್ರ ಶೋಷಣೆಗೆ ಗುರಿ ಮಾಡಿದ್ದ ಬಾಲ್ಯವಿವಾಹ, ವಿಧವೆಯರಿಗೆ ಮರುವಿವಾಹ ನಿರಾಕರಣೆ ಮುಂತಾದವುಗಳಿಗೆ ಸ್ವಾತಂತ್ರ್ಯ ಹೋರಾಟದ ಕಾಲಘಟ್ಟದಲ್ಲಿ ವಿರೋಧ ವ್ಯಕ್ತಪಡಿಸುವ ಧೋರಣೆಗಳು, ಸುಧಾರಣಾ ಚಳುವಳಿಗಳ ಅಂಗವಾಗಿ ಕಂಡುಬಂದವು. ಈ ಸುಧಾರಣೆಗಳು ಕಂಡು ಬರಲು ಕಾರಣವನ್ನು ಪ್ರಾಯಶಃ ಬ್ರಿಟಿಷರು ತಮ್ಮ ವಸಾಹತುಗಳ ಜನರು ಅನಾಗರಿಕರು ಎಂದು ಅವಮಾನಿಸುತ್ತಿದ್ದುದೇ ಎಂದೂ ಗುರುತಿಸಬಹುದು. ಈ ಮೂದಲಿಕೆಯಿಂದ ಎಚ್ಚೆತ್ತ ವಿದ್ಯಾವಂತ ವರ್ಗವೊಂದು ಮಹಿಳೆಯರ ಶಿಕ್ಷಣಕ್ಕೆ ಪ್ರಾಮುಖ್ಯತೆ ನೀಡಿತು.

ಈ ಹಂತವನ್ನು ತೇಜಸ್ವಿನಿ ನಿರಂಜನ ಹಾಗೂ ಸೀಮಂತಿನಿ ನಿರಂಜನ ಗುರುತಿಸುವಂತೆ 'ಭಾರತದಲ್ಲಿ ಸ್ತ್ರೀಯರು ಮೊದಲಿಗೆ ಸುಧಾರಣೆಯ ವಸ್ತುಗಳೆಂಬಂತೆ

ಸಮಾಜ ಸುಧಾರಣಾ ಚಳುವಳಿಗಳ ಕಡೆಗೆಳೆಯಲ್ಪಟ್ಟರು'.[1] ಆದರೆ ಬಹಳ ಕಡಿಮೆ ಸಮಯದಲ್ಲಿಯೇ ಸ್ತ್ರೀ ಶಿಕ್ಷಣದ ಉಪಯೋಗ ಪಡೆದು ವೈದ್ಯಕೀಯ, ಕಾನೂನು ಮುಂತಾದ ಕ್ಷೇತ್ರಗಳಲ್ಲಿ ಪರಿಣತಿ ಪಡೆದು ಅವುಗಳಲ್ಲಿ ತೊಡಗಿಸಿಕೊಂಡರು. ಜ್ಞಾನದ ಲಾಭವನ್ನು ಪಡೆದಿದ್ದ ಮಹಿಳೆಯರು ದೇಶದ ಸ್ವಾತಂತ್ರ್ಯದ ಮಹತ್ವವನ್ನು ಅರಿತವರಾಗಿದ್ದರು. ಆದ್ದರಿಂದ ಸ್ವಾತಂತ್ರ್ಯ ಚಳುವಳಿಗಳಲ್ಲಿಯೂ ಸಕ್ರಿಯವಾಗಿ ಭಾಗವಹಿಸಿದರು.

ಮಹಿಳಾ ವಿಮೋಚನೆಯ ಹೋರಾಟವು ಒಂದು ನಿಶ್ಚಿತ ಸ್ವರೂಪವನ್ನು ಪಡೆದದ್ದು 1970ರ ದಶಕದಲ್ಲಿ. '1970 ರ ದಶಕ ಭಾರತೀಯ ಮಹಿಳಾ ಹೋರಾಟದ ಮೂರನೆಯ ಹಂತವನ್ನು ಕಂಡಿತು. ಅನೇಕ ಸ್ತ್ರೀ ಸಂಘಟನೆಗಳು ಇಲ್ಲಿ ತಲೆಯೆತ್ತಿದವು. ಇವು ಅನೇಕ ಮಹಿಳಾ ಸಮಸ್ಯೆಗಳನ್ನು ಕೈಗೆತ್ತಿಕೊಂಡು ಹೋರಾಟ ನಡೆಸಿದವು, ಅವುಗಳಲ್ಲಿ ವರದಕ್ಷಿಣೆ ಸಾವು, ಬಲಾತ್ಕಾರ ಕಾನೂನು, ಬೆಲೆ ಏರಿಕೆ, ಗರ್ಭನಿರೋಧಕ ಚುಚ್ಚುಮದ್ದುಗಳು, ಸ್ತ್ರೀ ಭ್ರೂಣಹತ್ಯೆ, ಪೋಲಿ ಕೀಟಲೆ, ಸಮಾನ ನಾಗರಿಕ ಸಂಹಿತೆ, ಪರಿಸರ ಸಂರಕ್ಷಣೆ ಹೀಗೆ ವಿವಿಧ ವಿಷಯಗಳನ್ನು ಕೈಗೆತ್ತಿಕೊಂಡು ಅವು ಹೋರಾಟ ನಡೆಸಿದವು.'[2]

ಇಂತಹ ಒಂದು ಸ್ಥಿತ್ಯಂತರದ ಸಮಯದಲ್ಲಿ ಸ್ತ್ರೀವಾದವು ಪಶ್ಚಿಮದಿಂದ ಆಮದಾದ ಸರಕು ಎಂಬ ನೆಪದಿಂದ ಅನೇಕರ ವಿರೋಧಕ್ಕೆ ಒಳಗಾಯಿತು. ಆದರೆ ಯಾವುದೇ ಒಂದು ಸಿದ್ಧಾಂತವು ಆಯಾ ಸಮಾಜದ, ಸಾಂಸ್ಕೃತಿಕ ಸಂದರ್ಭದ ಅನಿವಾರ್ಯತೆಯಿಂದ ಹುಟ್ಟುತ್ತದೆ ಅಥವಾ ಈ ಸಿದ್ಧಾಂತದ ಉಗಮಕ್ಕೆ ಕಾರಣವಾದ ಅನುಭವಗಳೇ ಇಲ್ಲಿನ ಸಂದರ್ಭದಲ್ಲಿಯೂ ಇದ್ದಾಗ ತಮ್ಮ ಅಗತ್ಯಗಳಿಗನುಗುಣವಾಗಿ ಮರುರಚಿಸಿಕೊಂಡು ಬದಲಾವಣೆಗಳನ್ನು ತರುವತ್ತ ಚಿಂತನೆಗಳನ್ನು ನಡೆಸಬಹುದು ಎಂಬ ಉತ್ತರವನ್ನು ಇಲ್ಲಿ ನೀಡಲಾಯಿತು.

ಸ್ತ್ರೀವಾದವು ಏಕಘನಾಕೃತಿಯ ಚಿಂತನೆಯಾಗಿರದೆ ಬೇರೆ ಬೇರೆ ಪ್ರದೇಶಗಳ ಬೇರೆ ಬೇರೆ ಸಾಮಾಜಿಕ ಸಾಂಸ್ಕೃತಿಕ ಸಂದರ್ಭಗಳಲ್ಲಿ ಬದುಕುತ್ತಿರುವವರ ಅನುಭವಗಳಿಂದ ರೂಪಗೊಳ್ಳುವಂತದ್ದಾಗಿದೆ. 'ಸ್ತ್ರೀವಾದವೆಂದರೆ, ವಿಭಿನ್ನ ಪ್ರದೇಶಗಳ ಮಹಿಳೆಯರ ಬೇರೆ ಬೇರೆಯೇ ಆದ ಅನುಭವಗಳ ಮೇಲೆ ಹೇರಬಹುದಾದ ಒಂದು ಸಿದ್ಧಾಂತವಾಗಲೀ, ವಿವರಣೆಯ ಚೌಕಟ್ಟಾಗಲೀ ಅಲ್ಲ. ಬದಲಾಗಿ ಮಹಿಳೆಯರ ಅನುಭವ, ಚರಿತ್ರೆಗಳನ್ನು ವ್ಯಾಖ್ಯಾನಿಸಿ ಅಸಮಾನತೆಯ ಯಥಾಸ್ಥಿತಿಯನ್ನು

ಬದಲಾಯಿಸುವ ಪ್ರಯತ್ನವೆಂದು ಅದನ್ನು ತಿಳಿಯಬೇಕು'[3] ಮೇಲಿನ ಹೇಳಿಕೆಯ ಹಿನ್ನೆಲೆಯಲ್ಲಿ ತೇಜಸ್ವಿನಿ ಮತ್ತು ಸೀಮಂತಿನಿ ನಿರಂಜನ ಅವರು 'ಸ್ತ್ರೀವಾದವೆಂದರೆ (ಯಾವುದೇ ದೇಶದಲ್ಲಿಯೂ) "ನಮ್ಮ ಸಂಸ್ಕೃತಿ"ಯ ವಿಮರ್ಶೆಯೇ ಆಗುತ್ತದೆ' ಎಂದು ಅಭಿಪ್ರಾಯಪಡುತ್ತಾರೆ.

ಪಶ್ಚಿಮದ ಪ್ರಮುಖ ಸ್ತ್ರೀವಾದಿ ಪ್ರಸ್ಥಾನಗಳು ಹೆಣ್ಣಿನ ಅಸಮಾನತೆಯ ನೆಲೆಯನ್ನು ಬಹಿರಂಗಪಡಿಸುವ ಕೆಲಸವನ್ನು ಮಾಡಿದವು. ಪ್ರಥಮವಾಗಿ ಲಿಂಗಭೇದವೆನ್ನುವುದು ಗಂಡು ಹೆಣ್ಣಿನ ದೈಹಿಕ ಭಿನ್ನತೆಗೆ ಸಂಬಂಧಿಸಿದ್ದು, ನೈಸರ್ಗಿಕವಾದದ್ದು ಎಂದು ಒಪ್ಪುವ ಈ ಸ್ತ್ರೀವಾದವು ಲಿಂಗ ಪ್ರಭೇದ(ಜೆಂಡರ್)ವು ಸಾಮಾಜಿಕವಾಗಿ, ಚಾರಿತ್ರಿಕವಾಗಿ ಮತ್ತು ಸಾಂಸ್ಕೃತಿಕವಾಗಿ ರೂಪಿಸಲ್ಪಟ್ಟ ಅರ್ಥಕಲ್ಪನೆಯಾಗಿದೆ ಎಂದು ನಂಬುತ್ತದೆ. ಸ್ತ್ರೀವಾದದ ಪ್ರಸ್ಥಾನಗಳು ಪ್ರಮುಖವಾಗಿ ಚರ್ಚಿಸಿದ ವಿಚಾರಗಳೇನು, ಎಂಬುದನ್ನು ಅವುಗಳು ಕಾಲದಿಂದ ಕಾಲಕ್ಕೆ ಬದಲಾದ ರೀತಿಯನ್ನು ಸಂಕ್ಷಿಪ್ತವಾಗಿ ಇಲ್ಲಿ ವಿವರಿಸಲಾಗುವುದು.

## ಉದಾರವಾದಿ ಸ್ತ್ರೀವಾದ:-

ಕೈಗಾರಿಕೀಕರಣದ ಫಲವಾಗಿ ಮಹಿಳೆಯರು ಹೊರಗಿನ ಜಗತ್ತಿನಲ್ಲಿ ದುಡಿಮೆಗೆ ತೊಡಗಿದ ನಂತರ ಆರ್ಥಿಕವಾಗಿ ಸ್ವಲ್ಪ ಸ್ವಾತಂತ್ರ್ಯ ಪಡೆದಾಗ ತಮಗೆ ಸಮಾಜದ ಎಲ್ಲ ನೆಲೆಗಳಲ್ಲಿಯೂ ಅಸಮಾನತೆಗಳಿರುವುದುನ್ನು ಕಂಡು ಕೊಂಡರು. ಸ್ತ್ರೀಯರ ಬಗೆಗೆ ಈ ರೀತಿಯ ಚಿಂತನೆಗಳು ತಮ್ಮ ಹಕ್ಕುಗಳಿಗಾಗಿ ಒತ್ತಾಯವನ್ನು ತಂದವು. ಇಂತಹ ಚಿಂತನೆಯು ಸಾಹಿತ್ಯದಲ್ಲಿ ಕಾಣಿಸಿಕೊಂಡುದು ಮೊದಲಿಗೆ ಹದಿನೆಂಟನೆಯ ಶತಮಾನದ ಲೇಡಿ ಮೇರಿ ವರ್ಟ್ಲಿ ಮಾಂಟೆಗೋ ಮತ್ತು ಮೇರಿವುಲ್‌ಸ್ಟನ್ ಕ್ರಾಫ್ಟ್ ಇವರಲ್ಲಿ ಎಂದು ಗುರುತಿಸಲಾಗುತ್ತದೆ. ಮೇರಿ ವುಲ್‌ಸ್ಟನ್ ಕ್ರಾಫ್ಟ್‌ಳ 'ಸ್ತ್ರೀಯರ ಹಕ್ಕುಗಳ ಸಮರ್ಥನೆ' ಸ್ತ್ರೀ ನಿಷ್ಠ ಚಿಂತನೆಯ ಅತಿ ಮುಖ್ಯ ಬರವಣಿಗೆಯೆಂದು ಹೇಳಲಾಗುತ್ತದೆ.

ಇಪ್ಪತ್ತನೆಯ ಶತಮಾನದ ಆದಿ ಭಾಗದಲ್ಲಿ ವರ್ಜೀನಿಯಾ ವುಲ್ಫ್ 'ತನ್ನದೇ ಆದ ಸ್ವತಂತ್ರ ಕೊಠಡಿ' (ಎ ರೂಮ್ ಆಫ್ ಒನ್ಸ್ ಓನ್, 1929) ಕೃತಿಯನ್ನು ರಚಿಸುತ್ತಾಳೆ. ಇದರಲ್ಲಿ ಸ್ತ್ರೀಯೊಬ್ಬಳು ಉತ್ತಮ ಸಾಹಿತ್ಯವನ್ನು ರಚಿಸಬೇಕಾದರೆ ಅವಳಿಗೆ ತನ್ನದೇ ಆದ ಕೊಠಡಿ/ಸ್ವತಂತ್ರ ಸ್ಥಳ ಮತ್ತು ಸ್ವಂತ ಆದಾಯಗಳಿರಬೇಕು ಎಂದು ವಾದಿಸುತ್ತಾಳೆ. 'ಮುಂದೆ ಸಿಮೋನ್ ದ ಬೋವಾ ಮತ್ತಿತರರು ಚರ್ಚಿಸಲಿದ್ದ

'ಪುರುಷನು ಸ್ತ್ರೀಯನ್ನು ಅನ್ಯಳಾಗಿಸುವಿಕೆ', 'ಸ್ತ್ರೀ ಪುರುಷ ಸ್ಥಾನಮಾನಗಳು' ಇತ್ಯಾದಿ ಒಂದು ನಿರ್ದಿಷ್ಟ ಕಾಲಮಾನದ ಸಾಮಾಜಿಕ ನಿರ್ಮಿತಿಗಳೇ ಹೊರತು ಜನ್ಮಜಾತವಲ್ಲ' ಎಂಬಂತಹ ಮೌಲಿಕ ವಿಚಾರಗಳನ್ನು ವುಲ್ಫ್ ಈ ಲೇಖನದಲ್ಲಿ ಚರ್ಚಿಸುತ್ತಾಳೆ.[4]

ಸಿಮೋನ್ ದ ಬುವಾ ತನ್ನ ಪ್ರಸಿದ್ಧ ಕೃತಿ ದಿ ಸೆಕೆಂಡ್ ಸೆಕ್ಸ್‌ನಲ್ಲಿ ಹೇಳುವಂತೆ "ಜೈವಿಕ ಸಂಗತಿಗಳಿಗೆ ಒಂದು ಮೌಲ್ಯ ಬರುವುದು ಸಾಮಾಜಿಕ ಕಟ್ಟುಪಾಡುಗಳಿಂದ, ವಿಧಿನಿಷೇಧಗಳಿಂದ"[5] ಸಮಾಜದಲ್ಲಿ ಹೆಣ್ಣೆಂಬುವವಳು ಸ್ವಂತ ಅಸ್ತಿತ್ವವನ್ನು ಪಡೆದು ಬದುಕುತ್ತಿಲ್ಲ. ಬದಲಾಗಿ ಅವಳು ಮಗುವಾಗಿ ಜನಿಸಿದಂದಿನಿಂದ ಹಂತ ಹಂತವಾಗಿ ಹೇರಲಾಗುವ ಸಾಮಾಜಿಕ ನಿಯಮಗಳಿಂದ ರೂಪುಗೊಂಡವಳು, ಇಂದಿನ ತನಕ ತಾನು ಬದುಕಿರುವ ರೀತಿಯೇ ಸಹಜ, ತನ್ನ ಪರಾಧೀನತೆಯೂ ಸಹಜವೇ ಎಂದು ನಂಬಿದ್ದವಳು. ಹೀಗೆ ನಂಬುವಂತೆ ಅವಳನ್ನು ರೂಪಿಸಿದ ಸಮಾಜೋ ಸಾಂಸ್ಕೃತಿಕ ನಿಯಮಗಳ ಹಿಂದೆ ಇರುವ ಸತ್ಯವನ್ನು ಅರಿಯಬೇಕಾಗಿದೆ ಎಂದೂ ವಾದಿಸುತ್ತಾಳೆ.

ಮೊದಮೊದಲು ಆರಂಭವಾದ ಚಳುವಳಿಗಳಿಂದ ತಮ್ಮದೇ ಆದ ರಾಜಕೀಯವನ್ನು ರೂಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಈಗ ಸಮಾಜದಲ್ಲಿರುವ ಚಿಂತನಾಕ್ರಮ ಮತ್ತು ನಿಯಮಗಳಲ್ಲಿ ಒಂದಿಷ್ಟು ಬದಲಾವಣೆಗಳಾದರೆ, ಅಸಮಾನತೆಯ ಪ್ರಶ್ನೆ ನಿವಾರಣೆಯಾಗುತ್ತದೆ ಎಂಬ ನಿಲುವುಗಳು ಹೆಚ್ಚಿನದೇನನ್ನು ಸಾಧಿಸಲಿಲ್ಲ. ಮಹಿಳಾ ಚಳುವಳಿಗಾರರು ಸಂಧಾನ, ಅನುಸಂಧಾನಗಳಿಂದ ಸ್ವಲ್ಪ ಮಟ್ಟಿಗೆ ಸವಲತ್ತುಗಳನ್ನು ಪಡೆದರಾದರೂ ಮಹಿಳಾ ವಿಮೋಚನೆಯ ಪ್ರಶ್ನೆ ಹಾಗೆಯೇ ಉಳಿಯಿತು.

**ತೀವ್ರವಾದಿಗಳು:-**

ಮಹಿಳಾ ಚಳುವಳಿಗಳು ಸಮುದಾಯ ಬಲವಾಗಿ ನಿಂತು ಚಳುವಳಿಯನ್ನು ತೀವ್ರಗೊಳಿಸುವ ಅಗತ್ಯವನ್ನು ಮನಗಂಡವು. ಸಮಾಜದ ಪರಿಗಣನೆಯಲ್ಲಿ ಹೆಣ್ಣನ್ನು ಒಂದು ಪ್ರತ್ಯೇಕ ಜಾತಿಯಾಗಿಯೇ ಇರಿಸಲಾಗಿದೆ. ಈ ವಾಸ್ತವ ಪ್ರಜ್ಞೆಯೊಂದಿಗೆ ಮಹಿಳಾ ಸಮುದಾಯದ ಅಸ್ತಿತ್ವದ ಶೋಧನೆಗೆ ಫ್ರಾನ್ಸ್, ಅಮೆರಿಕ, ಬ್ರಿಟನ್‌ಗಳಂತಹ ದೇಶಗಳ ಮಹಿಳೆಯರು ತೊಡಗಿದರು. ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯ ವ್ಯಕ್ತಿತ್ವದ ಎಲ್ಲ ಅಂಶಗಳನ್ನು ಅಧೀನ ದರ್ಜೆಯವೆಂದು ಪರಿಗಣಿಸಲಾಗಿದೆ.

ಸ್ತ್ರೀಜಾತಿಯನ್ನು ಹೀಗೆ ಪ್ರತ್ಯೇಕಿಸಿರುವುದು ತನ್ನ ಅಧೀನಳಾಗಿ ಬದುಕಬೇಕೆಂದೇ ಹೊರತು, ಆ ಜಾತಿ ತನ್ನಿಂದ ಪ್ರತ್ಯೇಕಗೊಳ್ಳಬೇಕೆಂದಲ್ಲ. ಹಾಗಾಗಿ, ಪ್ರತ್ಯೇಕಿತಳಾದರೂ ಹೆಣ್ಣನ್ನು ಪುರುಷ ಹಾಗೆ ತನ್ನಷ್ಟಕ್ಕೆ ಇರಲು ಬಿಡುವುದಿಲ್ಲ. ಈ ಅಂಶವನ್ನು ಕೆಲವು ಸ್ತ್ರೀವಾದಿಗಳು ಬಳಸಿಕೊಂಡರು.

ಈ ವಿಧಾನವು ಪುರುಷ ನಿರ್ಮಿತ ವ್ಯವಸ್ಥೆಯಾದ ವಿವಾಹ, ಕುಟುಂಬಗಳಿಂದ ಪ್ರತ್ಯೇಕವಾಗಿ ಉಳಿಯುವ ಒಂದು ಚಿಂತನೆಯನ್ನು ಒಳಗೊಂಡಿತ್ತು. ಲೈಂಗಿಕತೆ ಮತ್ತು ತಾಯ್ತನಗಳ ಮೂಲಕ ಹೆಣ್ಣಿನ ಶರೀರವು ಪುರುಷನ ಆಕ್ರಮಣಕ್ಕೊಳಗಾಗದಂತೆ ಪ್ರತಿರೋಧವನ್ನು ವ್ಯಕ್ತಪಡಿಸಲಾಯಿತು. ಲೈಂಗಿಕತೆ ಮತ್ತು ತಾಯ್ತನಗಳು ಹೆಣ್ಣಿಗೂ ಅಗತ್ಯವಾದವುಗಳೇ ಆದರೂ, ಈ ಅಗತ್ಯಗಳನ್ನು ಬಲಿ ಕೊಟ್ಟಾದರೂ ಪುರುಷ ಸಂಬಂಧಗಳನ್ನು ನಿರಾಕರಿಸಬೇಕು ಎಂಬ ನಿರ್ಧಾರಕ್ಕೆ ಈ ಚಿಂತಕಿಯರು ಬರುತ್ತಾರೆ.

ಈ ಚಿಂತನೆಯನ್ನು ಸಮಾಜದಲ್ಲಿ ಜಾರಿಗೊಳಿಸುವ ಕೆಲಸ ಸುಲಭವಾದುದಾಗಿರಲಿಲ್ಲ. ಹಾಗೂ ಈ ಪ್ರತ್ಯೇಕತೆಯನ್ನು ಎಲ್ಲ ಮಹಿಳೆಯರೂ ಅನುಸರಿಸುವಂತದ್ದೂ ಆಗಿರಲಿಲ್ಲ. ಆದರೆ ಹೆಣ್ಣಿನ ಬದುಕು ಯಾವ ರೀತಿ ಶೋಷಿಸಲ್ಪಟ್ಟಿದೆ ಎಂಬುದಕ್ಕೆ ಕಾರಣಗಳನ್ನು ಹುಡುಕಲು ಈ ಚಿಂತನೆ ಅತ್ಯಂತ ಫಲಕಾರಿಯಾಗಿ ಕಂಡಿದೆ. 'ಹೆಣ್ಣು ಎಂದರೆ ಯಾರು ಅವಳ ಗುಣ ಸ್ವಭಾವ, ವರ್ತನೆ, ಸಾಮರ್ಥ್ಯಗಳು ಯಾವ ಸ್ವರೂಪದವು ಎಂಬುದನ್ನೆಲ್ಲಾ ಈ ಪುರುಷ ಚಿಂತನೆ ತನಗೆ ಬೇಕಾದಂತೆ ವ್ಯಾಖ್ಯಾನಿಸಿಬಿಟ್ಟಿದೆ. ಸಾಮಾಜಿಕ ವಾಸ್ತವವಾಗಿ ಉಳಿಯುವುದು ಈ ವ್ಯಾಖ್ಯಾನವೇ'[6] ಶುಲಾಮಿತ್ ಫೈರ್‌ಸ್ಟೋನ್, ಮೇರಿಡಾಲಿ, ಸೂಸನ್ ಗ್ರಿಫನ್‌ರಂತಹವರು ಇಂತಹ ವ್ಯಾಖ್ಯಾನಗಳನ್ನು ಪ್ರಶ್ನಿಸಿದರು. ಸ್ತ್ರೀತ್ವ, ಸ್ತ್ರೀಯಾತ್ಮಕತೆಗಳನ್ನು ಮರುಚಿಂತನೆಗೆ ಒಳಪಡಿಸಿದರು.

ಈ ವಾದವು ಬಹಳ ಶಕ್ತಿಶಾಲಿಯಾದ ಮಹಿಳಾ ಧ್ವನಿಯೊಂದನ್ನು ನಿರ್ಮಿಸುವಂತಹದಾಗಿತ್ತು. ಆದರೆ ಹಲವು ಸಂಪ್ರದಾಯವಾದಿ ಸ್ತ್ರೀವಾದಿ ಹೆಂಗಸರೇ ಇದಕ್ಕೆ ವಿರೋಧ ವ್ಯಕ್ತಪಡಿಸಿದರು. ಹೀಗೆ ವಿರೋಧಿಸಿದ ಹೆಂಗಸರ ವಿರೋಧದ ಹಿಂದೆ ಪುರುಷ ಪ್ರಧಾನ ಮನಸ್ಸುಗಳೇ ಕೆಲಸ ಮಾಡಿವೆ ಎಂಬುದನ್ನು ನೆನಪಿನಲ್ಲಿರಿಸಿಕೊಳ್ಳಬೇಕು.

ಹೆಣ್ಣು ಜಾತಿಯನ್ನು ಗಂಡಸರ ಕಾಮದ ವಸ್ತುವೆಂಬಂತೆ ಗುರುತಿಸಿ ನಡೆಸಿಕೊಂಡು ಬರಲಾಗುತ್ತಿದೆಯೇ ಹೊರತು ಹೆಂಗಸರಿಗೂ ಇದರ ಅಗತ್ಯವಿರುತ್ತದೆ ಎಂಬುದನ್ನು ನಂಬಲು, ಒಪ್ಪಲೂ ಈ ಸಮಾಜ ಸಿದ್ಧವಿಲ್ಲ. ಆದ್ದರಿಂದಲೇ

ಪಶ್ಚಿಮದಲ್ಲಿ ಹೆಂಗಸರ ನಡುವೆಯೇ ಇಂಥಾ ಲೈಂಗಿಕ ಸಂಬಂಧಗಳು ಇರಲು ಸಾಧ್ಯ ಎಂಬುದನ್ನು ಉದ್ದೇಶಪೂರ್ವಕವಾಗಿ ಬಹಿರಂಗವಾಗಿ ಘೋಷಿಸಿದರು. ಈ ಸಂಬಂಧಗಳನ್ನು ಹೊಂದಿದವರಲ್ಲಿ ವಿವಾಹಿತ ಸ್ತ್ರೀಯರು, ಬೇರೆ ಬೇರೆ ಸ್ತರಗಳ ಮಹಿಳೆಯರೂ ಇದ್ದರು. ಈ ಸಂಬಂಧವನ್ನು ಲೆಸ್ಬಿಯನ್ ಎಂದೂ ಕರೆಯಲಾಯಿತು.

ಈ ಹೊಸ ಸ್ತ್ರೀವಾದಿ ದೃಷ್ಟಿಕೋನದಿಂದ ಸಾಹಿತ್ಯ ಕೃತಿಗಳನ್ನು ವಿಮರ್ಶೆಗೆ ಒಳಪಡಿಸುತ್ತಾ ಲೆಸ್ಬಿಯನ್ ಚಿಂತಕಿಯರು ಪುರುಷ ಚಿಂತನೆಯ ಸೋಗುಗಳನ್ನು ಅರ್ಥ ಮಾಡಿಕೊಳ್ಳಬಹುದೆಂಬುದನ್ನು ಪ್ರತಿಪಾದಿಸಿದರು.

**ಸಾಂಸ್ಕೃತಿಕ ಸ್ತ್ರೀವಾದ, ಸ್ತ್ರೀ ಪರಿಸರವಾದಃ-**

ಪುರುಷ ಚಿಂತನೆಯು ತನ್ನೆಲ್ಲ ಬುದ್ಧಿಶಕ್ತಿಯನ್ನು ಬಳಸಿ ಸ್ತ್ರೀಯರನ್ನು ತನಗೆ ಬೇಕಾದಂತೆ ನಿಯಂತ್ರಣದಲ್ಲಿಟ್ಟುಕೊಂಡಿರುವುದನ್ನು ಚರಿತ್ರೆಯ ಮರುಶೋಧನೆಯಿಂದ ಕಂಡುಕೊಂಡಿದ್ದ ತೀವ್ರವಾದಿ ಸ್ತ್ರೀವಾದಿಗಳು ತಮ್ಮ ಕೋಪವನ್ನು ವ್ಯಕ್ತಪಡಿಸಿದರಾದರೂ ಅದರಿಂದ ಯಾವುದೇ ಬದಲಾವಣೆಗಳು ಉಂಟಾಗಲಿಲ್ಲ. ಈ ಚಿಂತನೆಯ ಹೊಸ ರೂಪವೊಂದನ್ನು ಸ್ತ್ರೀವಾದಿ ಚಿಂತಕಿಯರು ಕಂಡುಕೊಂಡರು. ಅದೇ ಸಾಂಸ್ಕೃತಿಕ ಸ್ತ್ರೀವಾದ.

ಸಾಮಾಜಿಕವಾಗಿ ಸ್ತ್ರೀಗುಣಗಳೆಂದು ಗುರುತಿಸಲ್ಪಡುವ ಗುಣಗಳಿಗಿಂತ ಪುರುಷ ಗುಣಗಳೆಂದು ಅದೇ ಸಮಾಜ ಗುರುತಿಸುವ ಗುಣಗಳು ಭಿನ್ನವೆಂಬ ಕಾರಣಕ್ಕೆ ಅಪಮೌಲ್ಯಗೊಳಿಸಿದೆ. ಹೀಗೆ ಅಪಮೌಲ್ಯಕ್ಕೆ ಒಳಗಾಗಿರುವ ಸ್ತ್ರೀಸಂಬಂಧಿತ ಗುಣಗಳನ್ನು ಮೌಲಿಕಗೊಳಿಸಲು, ಮತ್ತೆ ಪರಿಷ್ಕರಿಸಲು ಈ ಸ್ತ್ರೀವಾದಿಗಳು ಸ್ತ್ರೀಯರದೇ ಆದ ಸಾಂಸ್ಕೃತಿಕ ಅಗತ್ಯವನ್ನು ಎತ್ತಿಹಿಡಿದರು. ಸಾಮಾಜಿಕ ವ್ಯವಸ್ಥೆ, ಸಾಂಪ್ರದಾಯಿಕ ನಂಬಿಕೆ, ಆಚರಣೆಗಳು, ಅರ್ಥವ್ಯವಸ್ಥೆಗಳಷ್ಟೇ ಅಲ್ಲದೆ ಹೆಣ್ಣಿನ ಶೋಷಣೆಗೆ ಬೇರೆ ಮೂಲಭೂತ ಕಾರಣಗಳೇನಾದರೂ ಇವೆಯೇ ಎಂಬುದನ್ನು ಈ ಚಿಂತನೆ ಶೋಧಿಸಲು ತೊಡಗಿತು. 'ಸ್ತ್ರೀ ಶಕ್ತಿ ಎನ್ನುವುದು ಮೂಲದಲ್ಲಿ ಜೀವ ಪ್ರೇಮವೇ ಆಗಿದೆ. ಇದರ ಬಹುಮುಖ್ಯ ನೆಲೆ ಅವಳ ಶರೀರವೇ ಆಗಿದೆ. ಪುರುಷ ಚಿಂತನೆಯ ಆಕ್ರಮಣ ಬಹುಮುಖ್ಯವಾಗಿ ಅವಳ ಈ ಶರೀರವನ್ನೇ ಗುರಿಯನ್ನಾಗಿಸಿಕೊಂಡಿದೆ. ಈ ಜೀವ ವಿರೋಧಿ ಆಕ್ರಮಣವನ್ನು ಎದುರಿಸಿ ಸ್ತ್ರೀ ಶಕ್ತಿಯನ್ನು ಮತ್ತೆ ಗಳಿಸಿಕೊಳ್ಳುವುದೇ ಈ ಸ್ತ್ರೀವಾದದ ಪ್ರಮುಖ ಚಿಂತನೆ'.[7] ಸ್ತ್ರೀ ಪುರುಷರಲ್ಲಿ ಇರುವ ನೈಸರ್ಗಿಕವಾದ ಲಿಂಗ ವೈಶಿಷ್ಟ್ಯಗಳನ್ನು ಆಧರಿಸಿ ಪುರುಷರಲ್ಲಿನ ಸ್ತ್ರೀದ್ವೇಷದ ನೆಲೆಗಳನ್ನು ಗುರುತಿಸಲು ಈ ಚಿಂತಕಿಯರು ಯತ್ನಿಸಿದರು.

ಸ್ತ್ರೀ ದೇಹದ ವೈಶಿಷ್ಟ್ಯಗಳಾದ ಸ್ತನಗಳು, ಗರ್ಭಕೋಶ, ಯೋನಿ, ಶಿಶ್ನಿಕೆಗಳೇ ಮೊದಲಾದ ಅಂಗಗಳು ಹಾಗೂ ಅವುಗಳಲ್ಲಿ ನಡೆಯುವ ಮಾಸಿಕ ಮುಟ್ಟು, ಗರ್ಭಧಾರಣೆ, ಜೀವದ ಫಲಿಸುವಿಕೆ, ಸ್ತನ್ಯಪಾನ ಶಕ್ತಿಗಳಂತಹ ಪ್ರಕ್ರಿಯೆಗಳು ಪುರುಷನಿಗೆ ಈ ಶಕ್ತಿ ತನಗಿಲ್ಲದಿರುವ ಬಗ್ಗೆ ಕೀಳರಿಮೆ, ಭಯ, ಆತಂಕಗಳನ್ನು ಉಂಟು ಮಾಡಿವೆ. ಆದ್ದರಿಂದ ಅವಳ ಈ ಶಕ್ತಿಯನ್ನು ನಿಯಂತ್ರಿಸುವ ಒಂದು ಕುತಂತ್ರವಾಗಿ ಪಿತೃ ಪ್ರಧಾನ ವಿಚಾರಧಾರೆ ಅದನ್ನು ಸಂಕುಚಿತವೂ ಕೆಳದರ್ಜೆಯದೂ ಆದ ನೆಲೆಗೆ ಒತ್ತರಿಸಿಡಲು ಯತ್ನಿಸುತ್ತಲೇ ಇದೆ. ಎಂದು ಇದರಲ್ಲಿರುವ ಸಾಂಸ್ಕೃತಿಕ ರಾಜಕಾರಣವನ್ನು ಸ್ತ್ರೀವಾದಿಗಳು ವಿವರಿಸಿದರು.

ಈ ರಾಜಕಾರಣಕ್ಕೆ ಪ್ರತಿರಾಜಕಾರಣವನ್ನು ಸೃಷ್ಟಿಸುವಾಗ ಈ ಜೈವಿಕ ವೈಶಿಷ್ಟ್ಯಗಳನ್ನು ಪ್ರಧಾನ ಸಾಧನವಾಗಿ ಬಳಸುವ ವಿಚಾರ ಮಾಡಿದರು. ಇದರೊಂದಿಗೆ ಹೆಣ್ಣಿನ ಬೌದ್ಧಿಕ ಸಾಮರ್ಥ್ಯ, ವಿಶೇಷ ಸೂಕ್ಷ್ಮ ಅರಿವು, ಸಂವೇದನೆ ನಿರೀಕ್ಷಣಾ ಶಕ್ತಿಗಳು, ನೋವನ್ನು ಸಹಿಸಬಲ್ಲ ಸಹನೆ, ತಾಳ್ಮೆಗಳೂ ಹೆಣ್ಣಿನ ಬಗೆಗೆ ಪುರುಷನಲ್ಲಿ ಆದಿಮ ಅಸೂಯೆ, ಭಯ, ಆತಂಕ, ವಿಸ್ಮಯಗಳಿಗೆ ಕಾರಣವಾಗಿವೆ. ಹಾಗೂ ಅವು ಇಂದಿಗೂ ಮುಂದುವರಿದಿವೆ ಎಂಬುದನ್ನು ಗ್ರಹಿಸಿದರು. 'ಹೆಣ್ಣಿನ ನಿಜವಾದ ಮೂಲಸತ್ವದ ಶೋಧನೆಯನ್ನು ಕುರಿತಂತೆ ಇತರ ಹೆಂಗಸರೊಂದಿಗೆ ಸಂಬಂಧಗಳನ್ನು ಬೆಸೆಯುವುದರ ಮೂಲಕವೇ ಪಿತೃ ಪ್ರಧಾನತೆಯ ಹಿಡಿತದಿಂದ ಪಾರಾಗುವ ಸೃಜನಶೀಲತೆಯನ್ನು ಗಳಿಸಿಕೊಳ್ಳುವುದು ಸಾಧ್ಯ ಎಂದು ನಂಬಿದರು.'[9]

ಸಾಂಸ್ಕೃತಿಕ ಸ್ತ್ರೀವಾದದ ಚಿಂತನೆ ಸ್ತ್ರೀತ್ವವನ್ನು ವೈಭವೀಕರಿಸುವ ಚಿಂತನೆಯಾಗಿದ್ದು, ಹೆಣ್ಣಿಗೆ ಇದುವರೆಗೆ ಸಮಾಜದಲ್ಲಿ ನೀಡಲಾಗಿದ್ದ ಸ್ಥಿರ ಮಾದರಿಗಳನ್ನು ಬೆಂಬಲಿಸುವ ಅಪಾಯವಿರುತ್ತದೆ ಎಂಬ ಮಿತಿ ಕಂಡು ಬಂದಿತು. ಸ್ತ್ರೀ ಶೋಷಣೆಯು ಜಾತಿ, ವರ್ಗ, ಜನಾಂಗ ಮೊದಲಾದವುಗಳೊಂದಿಗೆ ಬೆರೆತ ಸಂಕೀರ್ಣ ಸ್ಥಿತಿಯದಾದ್ದರಿಂದ ಈ ಅಪಾಯ ಮತ್ತಷ್ಟು ತೀವ್ರವಾಗುವ ಸಾಧ್ಯತೆ ಇರುವುದರಿಂದ ಈ ವಾದವು ಪರಿಣಾಮಕಾರಿಯಾಗಲು ಸಾಧ್ಯವಾಗಲಿಲ್ಲ.

**ಮಾರ್ಕ್ಸ್‌ವಾದ, ಸಮಾಜವಾದ ಮತ್ತು ಸ್ತ್ರೀವಾದ:-**

'ಪ್ರಕೃತಿಯು ಸಂಪನ್ಮೂಲ ವಿತರಣಾ ವಿಧಾನದಲ್ಲಿ ಜೀವಿಯು ಪ್ರಾಥಮಿಕ ಭೌತಿಕ ಅಗತ್ಯಗಳು ಸಾಧಾರಣ ಸಂದರ್ಭಗಳಲ್ಲಿ ನಿರಾಕರಣೆಗೊಳ್ಳುವುದಿಲ್ಲ. ಆದರೆ ಪ್ರಕೃತಿಯನ್ನು ತನ್ನ ನಿಯಂತ್ರಣಕ್ಕೆ ತೆಗೆದುಕೊಳ್ಳಲು ಹೊರಟ ಮಾನವ ಸಮಾಜದಲ್ಲಿ ಮಾತ್ರ ಈ ಸಹಜ ವಿತರಣಾ ವಿಧಾನಕ್ಕೆ ಧಕ್ಕೆಯೊದಗಿಬಿಟ್ಟಿದೆ. ಉಳಿದ ಯಾವ

ಪ್ರಾಣಿ ಸಮುದಾಯದಲ್ಲೂ ಸಾಧ್ಯವೇ ಇಲ್ಲದ ಶೋಷಣೆಯ ಕ್ರಿಯೆ ಇಲ್ಲಿ ಪ್ರಧಾನ ಲಕ್ಷಣವೇ ಆಗಿಬಿಟ್ಟಿದೆ. ಈ ಬಲವೇ ಬದುಕುವ ವಿಧಾನ ಎಂಬಂತೆಯೂ ಆಗಿದೆ. ಮೊದಲ ಬಗೆಯ ಈ ಅಸಮಾನ ನೆಲೆ ಕಾಣಿಸಿಕೊಂಡದ್ದು ಸ್ತ್ರೀ ಪುರುಷರ ನಡುವೆಯೇ'[10] ಈ ರೀತಿ ಸಂಪನ್ಮೂಲಗಳನ್ನು ತಮ್ಮ ಕುತಂತ್ರ ಮತ್ತು ಕೌಶಲಗಳನ್ನು ಬಳಸಿ ಗಳಿಸಿಕೊಳ್ಳಲು ಸಾಧ್ಯವಾದಾಗ ಉಳಿದವರು ಈ ಸಂಪನ್ಮೂಲಗಳ ಕೊರತೆಯನ್ನು ಎದುರಿಸುತ್ತಾ ಬದುಕುವುದು ಅನಿವಾರ್ಯವಾಯಿತು. ಇದೇ ಕ್ರಮೇಣ ಸಮಾಜದಲ್ಲಿ ಜಾತಿ, ಜನಾಂಗ, ವೃತ್ತಿ, ವರ್ಣ, ಕಸುಬುಗಳೆಂಬ ಶ್ರೇಣಿಗಳು ಬೇರೆ ಬೇರೆ ಹೆಸರಿನಲ್ಲಿ ಸ್ಥಿರವಾದವು.

ಈ ಸ್ಥಿರ ಕಲ್ಪನೆಗಳು ಆಧುನಿಕ ಜಗತ್ತಿನ ಪ್ರಮುಖ ಘಟ್ಟವೆನಿಸಿದ ಕೈಗಾರಿಕೀಕರಣದ ಹಂತದಲ್ಲಿ ಪ್ರಶ್ನೆಗೊಳಗಾದವು. ಶ್ರಮ ಮತ್ತು ಗಳಿಕೆಯ ಸಂಬಂಧದಲ್ಲಿ ಹೊಸ ಪ್ರಶ್ನೆಗಳು ಹುಟ್ಟಿದವು. ಇದು ಕೇವಲ ವೈಯಕ್ತಿಕ ನೆಲೆಯಲ್ಲಿ ಮಾತ್ರವಲ್ಲದೆ ಸಮುದಾಯಗಳ ನೆಲೆಯಲ್ಲಿ ಸಾಧ್ಯವಾಯಿತು.

ಮಾರ್ಕ್ಸ್ ಮತ್ತು ಏಂಗಲ್ಸ್‌ರವರು ಆರ್ಥಿಕತೆ ಮತ್ತು ಸಾಮಾಜಿಕ ಶ್ರೇಣೀಕರಣಗಳ ಪ್ರಶ್ನೆಗಳನ್ನು ಕುರಿತು ಚಿಂತಿಸಿ ಹೊಸ ಸಿದ್ಧಾಂತಗಳನ್ನು ರೂಪಿಸಿದರು. ಮಾರ್ಕ್ಸ್ ತನ್ನ ಚಿಂತನೆಯಲ್ಲಿ ಮಹಿಳಾ ಅಸಮಾನತೆಯ ಪ್ರಶ್ನೆಯನ್ನು ಪ್ರಸ್ತಾಪಿಸದಿದ್ದರೂ ಏಂಗಲ್ಸ್ ಕುಟುಂಬ, ಖಾಸಗಿ ಆಸ್ತಿ, ಮತ್ತು ಪ್ರಭುತ್ವಗಳ ಕಲ್ಪನೆಯೇ ಸಮಾಜದಲ್ಲಿನ ಅಸಮಾನತೆಯ ನೆಲೆಗಳನ್ನು ಸ್ಥಿರಗೊಳಿಸಲು ಕಾರಣ ಎಂಬುದನ್ನು ವಿವರಿಸುವಾಗ ಪ್ರಾಸಂಗಿಕವಾಗಿ ಲಿಂಗ ತಾರತಮ್ಯದ ನೆಲೆಗಳನ್ನು ಮುಖ್ಯವಾಗಿ ಗುರುತಿಸಿದನು.

ಏಂಗಲ್ಸ್ ಮತ್ತು ಅವನ ಶಿಷ್ಯ ಆಗಸ್ಟ್ ಬೆಬಲ್ ಆಸ್ತಿಯ ಹಕ್ಕು ಪಿತೃವಂಶೀಯವಾಗಿ ಸಾಗುವ ಉದ್ದೇಶದಿಂದಲೆ, ಹಲವು ನಿಯಮಗಳನ್ನು ಜಾರಿಗೊಳಿಸಿದ ವಿವಾಹ, ಕುಟುಂಬಗಳೆಂಬ ಸಾಮಾಜಿಕ ಸಂಸ್ಥೆಗಳನ್ನು ಕಟ್ಟಲಾಯಿತು ಎಂಬುದನ್ನು ಪ್ರತಿಪಾದಿಸಿದರು. ಇದನ್ನು ಸ್ತ್ರೀವಾದಿಗಳು ಅರ್ಥ ಮಾಡಿಕೊಂಡರು. ಈ ಹುನ್ನಾರದಿಂದ ಮಹಿಳೆಯನ್ನು ಮನೆಯ ಒಳಗಿನ ಕೆಲಸಗಳಿಗೆ ಸೀಮಿತಗೊಳಿಸಿ ಅವಳ ಗಳಿಕೆಯು ಅನುತ್ಪಾದಕವೆಂಬ ಭ್ರಮೆಯಲ್ಲಿರಿಸುವ ಕೆಲಸ ನಡೆಯಿತು. ಸಂತಾನೋತ್ಪತ್ತಿಯ ಶ್ರಮವನ್ನು, ಲೈಂಗಿಕತೆಯ ಚಟುವಟಿಕೆಗಳನ್ನು ತನ್ನ ಅಧೀನದಲ್ಲಿರಿಸಿಕೊಳ್ಳುವ ನಿಯಮಾವಳಿಗಳನ್ನು ವಿವಾಹ ಎಂಬ ಸಂಸ್ಥೆಯ ಮೂಲಕ ಜಾರಿಗೊಳಿಸಲಾಯಿತು. ಈ ವ್ಯವಸ್ಥೆಯಲ್ಲಿ ಶತಮಾನಗಳಿಂದ ಹೆಣ್ಣು ತನ್ನದೇ ಆದ ಆರ್ಥಿಕ ಮೂಲವನ್ನು

ಹೊಂದುವುದು ಅಸಾಧ್ಯವೇ ಆಗಿದೆ ಎಂಬುದನ್ನು ಸ್ತ್ರೀವಾದಿಗಳು (ಇದರ ಹಿಂದಿನ ಆರ್ಥಿಕ ಮತ್ತು ಸಾಮಾಜಿಕ ರಾಜಕಾರಣಗಳನ್ನು) ಅರ್ಥ ಮಾಡಿಕೊಳ್ಳಲು ಯತ್ನಿಸಿದರು.

ಸ್ತ್ರೀ ಪುರುಷರ ನಡುವಣ ಸಂಬಂಧಗಳ ಸ್ವರೂಪದಲ್ಲೇ ಮೂಲ ಬದಲಾವಣೆಗಳು ಬರದ ಹೊರತು ಸಮಾನತೆಯನ್ನು ಸಾಧಿಸಲಾಗುವುದಿಲ್ಲ. ಸಮಾನ ನೆಲೆಯಲ್ಲಿ ಮಹಿಳೆ ಪುರುಷನೊಂದಿಗೆ ಮಾತನಾಡಲು ಬೇಕಾದ ಶಕ್ತಿಯು ಪುರುಷ ರಾಜಕಾರಣಕ್ಕೆ ಪ್ರತಿಯಾಗಿ ರೂಪಿತವಾದ ಮಹಿಳಾ ರಾಜಕಾರಣದಿಂದ ಮಾತ್ರ ಸಾಧ್ಯ ಎಂದು ಸ್ತ್ರೀವಾದಿಗಳು ಚಿಂತಿಸಿದರು. ಆರ್ಥಿಕ ಮತ್ತು ಸಾಮಾಜಿಕ ಸಂರಚನೆಗಳು ಅಂತರ್ ಸಂಬಂಧವುಳ್ಳವೇ ಆದ್ದರಿಂದ ಆರ್ಥಿಕತೆಯಲ್ಲಿ ಬದಲಾವಣೆಗಳು ಸಾಧ್ಯವಾದರೆ ಸಾಮಾಜಿಕ ಸ್ಥಾನಮಾನಗಳಲ್ಲೂ ಬದಲಾವಣೆಗಳನ್ನು ತರಲು ಸಾಧ್ಯ ಎಂದು ಇವರು ನಂಬಿದರು.

**ಬ್ರಿಟಿಷ್ ಮಹಿಳಾ ಚಳುವಳಿ:-**

ಬ್ರಿಟಿಷ್ ಮಹಿಳಾ ಚಳುವಳಿಯು ಮಾರ್ಕ್ಸ್‌ವಾದವನ್ನು ಕ್ರಿಯಾತ್ಮಕವಾಗಿ ಒಪ್ಪಿಕೊಂಡು ಬಂಡವಾಳಶಾಹಿ ಸಮಾಜದಲ್ಲಿ ಮಹಿಳೆಯ ಅಧೀನತೆಗೆ ಸಾಮಾಜಿಕತೆಯ ಕಾರಣಗಳನ್ನು ಶೋಧಿಸಿ ತನ್ನದೇ ಆದ ವಿಶ್ಲೇಷಣೆ ನೀಡಲು ಯತ್ನಿಸಿತು. ಜೂಲಿಯಟ್ ಮಿಶೆಲ್, ಶೀಲಾ ರೋಬಾತಮ್, ಮಿಶೆಲ್ ಬ್ಯಾರೆಟ್ ಮುಂತಾದವರು ಈ ನಿಟ್ಟಿನಲ್ಲಿ ಅನೇಕ ಕೃತಿಗಳನ್ನು ರಚಿಸಿದರು. ಮಹಿಳೆಯ ಮನೆ ಒಳಗಿನ ದುಡಿಮೆ ಹಾಗೂ ಸಂತಾನೋತ್ಪತ್ತಿ ಚಟುವಟಿಕೆಗಳಿಗೆ ಅನ್ವಯಿಸಿದಂತೆ ಮಹಿಳೆಯ ದುಡಿಮೆಯನ್ನು ಅದೃಶ್ಯ ಮಾಡಿಬಿಡುವ ಪುರುಷ ರಾಜಕಾರಣವನ್ನು ಇವರು ಬಯಲಿಗೆಳೆದರು.

**ಅಮೆರಿಕದ ಮಹಿಳಾ ಚಳುವಳಿ:-**

ಮಹಿಳೆಯ ಅಸಮಾನತೆಯನ್ನು ವಿರೋಧಿಸುವ ಧ್ವನಿ ಚಳುವಳಿಗಳ ರೂಪದಲ್ಲಿ ಕೇಳಿಬಂದದ್ದು ಒಂದು ಚಾರಿತ್ರಿಕ ಅಗತ್ಯವೇ ಆಗಿತ್ತು. ಪುರುಷ ಚಿಂತನೆಯಲ್ಲಿರುವ ಮಹಿಳಾ ವಿರೋಧಿ ನೆಲೆಗಳನ್ನು ವಿಮರ್ಶಿಸುವ, ಪ್ರಶ್ನಿಸುವ ಕೆಲಸವನ್ನು ಚಳುವಳಿಗಳ ಹಿಂದಿನ ಸ್ತ್ರೀವಾದಿ ಚಿಂತನೆಗಳು ಮಾಡಿದವು. ಅಮೆರಿಕದ ಮಹಿಳಾ ಚಳುವಳಿಯು ಒಂದು ವಿಭಿನ್ನ ರೀತಿಯಲ್ಲಿ ತನ್ನ ಪ್ರಕ್ರಿಯೆಯನ್ನು ರೂಪಿಸಿತು.

ಮಹಿಳಾ ಅಧ್ಯಯನವನ್ನು ಶೈಕ್ಷಣಿಕ ಶಿಸ್ತಿಗೆ ಒಳಪಡಿಸಿ ಮಹಿಳಾ ಲೋಕವನ್ನು ಕುರಿತ ಅಧ್ಯಯನ, ಸಂಶೋಧನೆಗಳಿಗೆ ಅವಕಾಶ ಮಾಡಿಕೊಟ್ಟರು. ಸಾಹಿತ್ಯ ಕೃತಿಗಳನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ವಿಮರ್ಶಿಸಿ ವಿಶ್ಲೇಷಣೆಗೆ ತೊಡಗುವ ಮೂಲಕ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯನ್ನು ನಿರ್ಮಿಸಿದರು. ಅಮೆರಿಕನ್ ಸ್ತ್ರೀವಾದಿಗಳು ಸಾಹಿತ್ಯ ಸೃಷ್ಟಿಯೇ ಪುರುಷ ಚಿಂತನೆಯ ಪ್ರತೀಕವಾಗಿದೆ, ಮಹಿಳೆಯ ಸೃಜನಶೀಲತೆಯಲ್ಲೂ ಪುರುಷ ಚಿಂತನೆಗಳೇ ಕೆಲಸ ಮಾಡುತ್ತವೆ, ಸಾಹಿತ್ಯ ವಿಮರ್ಶೆಯ ಮಾನದಂಡಗಳೂ ಪುರುಷ ನಿರ್ಮಿತವೇ ಆಗಿದ್ದು ತಮ್ಮ ಅನುಕೂಲಕ್ಕೆ ತಕ್ಕಂತೆ ನಿರ್ಮಿತವಾದ ಶ್ರೇಷ್ಠತೆಯ ಮಾನದಂಡಗಳನ್ನು ಮಹಿಳಾ ಸಾಹಿತ್ಯವನ್ನು ವಿಮರ್ಶಿಸಲು ಬಳಸುವುದರ ಮೂಲಕ ಮಹಿಳೆಯ ಸಾಹಿತ್ಯವನ್ನು ಎರಡನೆಯ ದರ್ಜೆಯದೆಂದು ವರ್ಗೀಕರಿಸುವ ರೀತಿಯನ್ನು ಇವರು ಬಹಳ ಬೇಗ ಅರ್ಥಮಾಡಿಕೊಂಡರು.

ಮೊದಲು ಸ್ತ್ರೀಯರೇ ರಚಿಸಿದ ಸಾಹಿತ್ಯದ ವಿಮರ್ಶೆಯಲ್ಲಿ ತೊಡಗಿದ್ದ ಮಹಿಳೆಯರು ನಂತರ ಸ್ತ್ರೀ ಪುರುಷರಿಬ್ಬರ ಸಾಹಿತ್ಯವನ್ನು ವಿಮರ್ಶಿಸಿ ಹೊಸ ಬಗೆಯ ವಿಶ್ಲೇಷಣೆಗಳನ್ನು ನೀಡಿದರು. ಸಾಹಿತ್ಯಕೃತಿಗಳಲ್ಲಿ ಸ್ತ್ರೀಪಾತ್ರಗಳು ಹಾಗೂ ಸ್ತ್ರೀ ಪ್ರತೀಕಗಳನ್ನು ತಮ್ಮ ಸ್ವಂತದ ಅನುಭವದ ಆಧಾರದ ಮೇಲೆ ವಿಮರ್ಶಿಸಲು ಆರಂಭಿಸಿದರು. ಆದರೆ ಈ ವಿಧಾನದಲ್ಲಿ ವಿಮರ್ಶಕಿಯರು ಸ್ವಂತದ ಅನುಭವಗಳನ್ನು ಪ್ರದರ್ಶಿಸುತ್ತಾ ಗೀಳಿನ ಮನೋಭಾವವನ್ನು ತೋರುವ ಅಥವಾ ತಮ್ಮ ಖಾಸಗಿತನವನ್ನು ಕಳೆದುಕೊಳ್ಳುವ ಸಂದಿಗ್ಧಕ್ಕೆ ಸಿಲುಕಿದರು. ಈ ಹಿನ್ನೆಲೆಯಲ್ಲಿ ಸ್ತ್ರೀವಾದಿ ಸಾಹಿತ್ಯ ವಿಮರ್ಶೆ ಶೋಧಿಸಬಯಸುವ ಆದರ್ಶ ಸ್ತ್ರೀ ಪ್ರತೀಕಗಳನ್ನು ಸೃಷ್ಟಿಸಲು ವಿಫಲವಾಯಿತು. ಈ ಸೋಲಿಗೆ ಕಾರಣವನ್ನು ಮಹಿಳೆಯರು ಸಾಮಾಜಿಕ ನಿರೀಕ್ಷೆಯ ಹೆಣ್ಣು ಗುಣಗಳ ಪ್ರತೀಕವಾಗಿ ಮಾತ್ರ ಕಾಣಿಸಿಕೊಳ್ಳುತ್ತಾರೆ ಎಂದು ಗುರುತಿಸಲಾಯಿತು.

'ಸ್ತ್ರೀವಾದಿ ವಿಮರ್ಶೆಯು ತಳೆಯುವ ಇನ್ನೊಂದು ಬಗೆಯ ನಿಲುವು 'ಲೋಕಗ್ರಹಿಕೆ'ಗೆ ಸಂಬಂಧಿಸಿದ್ದು'.[11] ಸ್ತ್ರೀಯರಿಗೆ ನೀಡುವ ಶಿಕ್ಷಣವು ಪುರುಷರನ್ನು ದೃಷ್ಟಿಯಲ್ಲಿಟ್ಟುಕೊಂಡಿರುವುದೇ ಆಗಿದೆ. ಈ ಕಾರಣದಿಂದ ಸ್ತ್ರೀಯು ಲೋಕವನ್ನು ಅರ್ಥ ಮಾಡಿಕೊಳ್ಳುವಾಗ ಪುರುಷನಿಗೆ ಅದು ಹೇಗೆ ಕಾಣಿಸುತ್ತದೆಯೋ ಅಥವಾ ತನ್ನ ಅನುಭವಗಳಿಂದ ಲೋಕವನ್ನು ತಾನು ಹೇಗೆ ಪರಿಭಾವಿಸುತ್ತಾನೋ ಅದೇ ಅಂತಿಮವೆಂದೂ, ಸ್ತ್ರೀಯರಿಗೂ ಅದೇ ಅನುಭವವೇ 'ಲೋಕಗ್ರಹಿಕೆ'ಗೆ ಆಧಾರವೆಂದು ಇದುವರೆವಿಗೂ ನಂಬಿಸಲಾಗಿದೆ. ಆದರೆ ಈ ರೀತಿಯ ತೀರ್ಮಾನಗಳಿಗೆ ಬರಲು ಯಾವುದೇ ಆಧಾರಗಳಿಲ್ಲ ಎಂದು ಸ್ತ್ರೀವಾದಿ ವಿಮರ್ಶಕಿಯರು ವಾದಿಸುತ್ತಾರೆ.

ಆದ್ದರಿಂದ ಒಂದು ಕೃತಿಯನ್ನು ವಿಮರ್ಶಿಸುವಾಗ ಅಥವಾ ರಚಿಸುವಾಗ ಭಿನ್ನ ದೃಷ್ಟಿಕೋನವಿರಲು ಸಾಧ್ಯ ಎಂಬುದನ್ನು ಗ್ರಹಿಸಬೇಕು ಎಂದು ಇವರು ಒಪ್ಪುತ್ತಾರೆ.

ಮಹಿಳಾ ಸಾಹಿತ್ಯಕೃತಿಗಳನ್ನು ವಿಮರ್ಶಿಸುವಾಗ ಪ್ರತ್ಯೇಕವಾಗಿ ಪರಿಗಣಿಸಬೇಕುಎಂದು ಸ್ತ್ರೀವಾದಿ ಲೇಖಕಿ ಎಲೈನ್ ಶೋವಾಲ್ಟರ್ ಪ್ರತಿಪಾದಿಸುತ್ತಾಳೆ. ಸ್ತ್ರೀ ಪುರುಷರಿಬ್ಬರಿಗೂ ಸಮಾನ ನೆಲೆಯ ಅವಕಾಶಗಳಿದ್ದಾಗ ಮೂಡಿ ಬರುವ ಸಾಹಿತ್ಯ ಕೃತಿಗಳಿಗೆ ಬೇಕಾದರೆ ಪ್ರಧಾನ ಧಾರೆಯ ಸಾಹಿತ್ಯ ವಿಮರ್ಶೆಯ ಮಾನದಂಡಗಳನ್ನು ಬಳಸಬಹುದು ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾಳೆ.

ಎಲೈನ್ ಶೋವಾಲ್ಟರ್ ಸ್ತ್ರೀ ಕೇಂದ್ರಿತ ದೃಷ್ಟಿಕೋನದ ಸಾಹಿತ್ಯದ ಅಧ್ಯಯನ ಮತ್ತು ವಿಮರ್ಶೆಗೆ ಸಂಬಂಧಿಸಿದ ವಿಚಾರಗಳನ್ನು ಹೆಚ್ಚು ಸ್ಪಷ್ಟವಾಗಿ ನಿರೂಪಿಸಿದಳು. ಮಹಿಳಾ ಸಾಹಿತ್ಯದಲ್ಲಿ ಕಂಡು ಬರುವ ಕೇಂದ್ರವಸ್ತು, ಪ್ರತಿಮೆ ಮುಂತಾದವುಗಳನ್ನು ಅವಳು ಅನಿವಾರ್ಯವಾಗಿ ಬದುಕಬೇಕಾಗಿರುವ ಸಾಮಾಜಿಕ ಸಂದರ್ಭಗಳು ನಿರ್ಧರಿಸುತ್ತವೆ ಎಂದು ಗುರುತಿಸಿದಳು. ಆದ್ದರಿಂದ ಸಾಹಿತ್ಯದ ಅಧ್ಯಯನ, ಅಭಿವ್ಯಕ್ತಿ, ವಿಮರ್ಶೆಗಳಂಥ ಸಂದರ್ಭಗಳಲ್ಲಿ ಪ್ರತ್ಯೇಕ ವಿಧಾನಗಳನ್ನು (ಪ್ರಧಾನ ಧಾರೆಯದಲ್ಲದ) ರೂಪಿಸಿಕೊಳ್ಳಬೇಕಾದ ಅನಿವಾರ್ಯತೆ ಇದೆ.

'ಸೃಜನಶೀಲತೆಯು ಅಧ್ಯಯನ, ಅಭಿವ್ಯಕ್ತಿ, ವಿಮರ್ಶೆಗಳೆಂಬ ಸಾಧನೆಯ ಮಾರ್ಗವನ್ನು ಪ್ರಜ್ಞಾಪೂರ್ವಕವಾಗಿಯೇ ಕ್ರಮಿಸಬೇಕು. ಶೋವಾಲ್ಟರ್ ಇಂತ ಪಯಣದ ಮಜಲುಗಳು ಹೇಗಿರಬಹುದು ಎಂದು ಕೂಡ ಕಲ್ಪಿಸುತ್ತಾಳೆ'.[12] ಈ ಪ್ರಯಾಣದ ಮೊದಲ ಹಂತದಲ್ಲಿ ಪುರುಷ ಚಿಂತನೆಯನ್ನು ಅನುಸರಿಸುವ ಪ್ರಕ್ರಿಯೆ ನಡೆಯುತ್ತದೆ. ಈ ಹಂತದಲ್ಲಿ ಮಹಿಳೆಯರು ಪ್ರಧಾನಧಾರೆಯ ಚಿಂತನೆಯನ್ನು ಒಪ್ಪಿ ಬರೆಯಲು ಕಲಿಯುತ್ತಾರೆ. ಇದು ಅವರಿಗೆ ಎರಡನೆಯ ಹಂತದಲ್ಲಿ ಪುರುಷ ಚಿಂತನೆಯ ಮಾದರಿ ಹಾಗೂ ಮಾನದಂಡಗಳನ್ನು ಪ್ರಶ್ನಿಸುವ, ಪ್ರತಿಭಟಿಸುವ ಹಂತಕ್ಕೆ ಕರೆದೊಯ್ಯುತ್ತದೆ. ಕೊನೆಗೆ ಈ ಪ್ರಶ್ನಿಸುವ ಮಾದರಿಯನ್ನು ಬಿಟ್ಟು ಆತ್ಮಶೋಧನೆಯ, ಪ್ರಬುದ್ಧವಾದ ಚಿಂತನೆಯ ಹಂತವನ್ನು ತಲುಪಬಹುದು ಎಂದು ವಾದಿಸುತ್ತಾಳೆ. ಹೀಗೆ ಮಹಿಳಾ ಸಾಹಿತ್ಯದ ನಿರ್ದಿಷ್ಟ ಗುರಿಯನ್ನು ಹಾಗೂ ಅದಕ್ಕೆ ಪೂರಕವಾಗಿ ಅನುಸರಿಸಬಹುದಾದ ವಿಧಾನಗಳನ್ನು ಹೇಳಿದ ಈಕೆಯ ಚಿಂತನೆಯು ಮಹಿಳಾ ಸಂಸ್ಕೃತಿಯ ಕಟ್ಟುವಿಕೆಗೆ ಸಹಾಯ ಮಾಡುವಂತದ್ದಾಗಿದೆ.

'ಈ ಹಿನ್ನೆಲೆಯಲ್ಲಿ, ಪ್ರಧಾನ ಧಾರೆಯ ಸಾಹಿತ್ಯ ಚರಿತ್ರೆಯು ಅದೃಶ್ಯವಾಗಿಸಿದ್ದ ಲೇಖಕಿಯರನ್ನು ಗುರುತಿಸಿ, ಕಳೆದೇ ಹೋಗಿರಬಹುದಾದ ಅವರ ಕೃತಿಗಳ ಶೋಧಕ್ಕೆ ತೊಡಗಿ ಸಾಹಿತ್ಯ ಚರಿತ್ರೆಯನ್ನು ಪುನಾರಚಿಸುವ ಮೂಲಕ, ಮಹಿಳಾ ಸಾಹಿತ್ಯ ಪರಂಪರೆಯನ್ನು ಕಟ್ಟಿಕೊಳ್ಳುವ ಕೆಲಸ ನಮ್ಮ ತುರ್ತಿನ ಅಗತ್ಯವೆನಿಸುತ್ತದೆ. ಸ್ವಂತದ ಅಗತ್ಯ, ಅಧ್ಯಯನ ಹಾಗೂ ಕಾಳಜಿಗಳ ಪ್ರೇರಣೆಯಿಂದ ತೊಡಗುವ ಈ ಪ್ರಯತ್ನವು ಮಹಿಳಾ ಸಂಸ್ಕೃತಿಯ ಸೂಕ್ತ ಮಾನದಂಡಗಳನ್ನು ರೂಪಿಸಿಕೊಳ್ಳಬಲ್ಲದು'.[13] ಸ್ತ್ರೀವಾದಿ ಸಾಹಿತ್ಯ ವಿಮರ್ಶೆಗೆ ಹೊಸದಾಗಿ ಕಂಡುಕೊಂಡ ವಿಮರ್ಶೆಯ ದೃಷ್ಟಿಕೋನಗಳಿಂದ ಸಾಹಿತ್ಯ ಕೃತಿಗಳ ಅಧ್ಯಯನ ಮಾಡಬಹುದು.

ಕನ್ನಡ ಮಹಿಳಾ ಸಾಹಿತ್ಯದಲ್ಲಿ ಅಥವಾ ಕನ್ನಡ ಸ್ತ್ರೀವಾದಿ ಬರಹಗಾರರಿಂದ ಈ ರೀತಿಯ ಕೆಲಸಗಳು ನಡೆಯುತ್ತಿವೆ. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಸ್ತ್ರೀವಾದದ ಬಗೆಗೆ ಬಂದಿರುವ ಹಲವು ಪುಸ್ತಕಗಳು ಹಾಗೂ ಸ್ತ್ರೀವಾದಿ ಅಧ್ಯಯನದ ಮುಖಾಂತರ ಹಿಂದಿನ ಲೇಖಕಿಯರ ಬದುಕು–ಬರಹಗಳನ್ನು ಪರಿಶೀಲಿಸಿರುವ ವಿಮರ್ಶಾ ಗ್ರಂಥಗಳನ್ನು ಇದಕ್ಕೆ ನಿದರ್ಶನವಾಗಿ ನೀಡಬಹುದು.

ಶೊವಾಲ್ಟರ್‌ಳ ನಂತರದ ಸ್ತ್ರೀವಾದಿಗಳೂ ಪುರುಷ ಚಿಂತನೆಯ ಮಾದರಿಯಲ್ಲಿಯೇ ಸಾಹಿತ್ಯಕೃತಿಗಳಲ್ಲಿ ಸ್ತ್ರೀಯರು ಕಾಣಿಸಿಕೊಂಡಿದ್ದಾರೆ. ಮುಂದೆ ಮಹಿಳೆಯರು ತಮ್ಮ ಕೃತಿಗಳಲ್ಲಿ ತಮ್ಮನ್ನು ವಿವರಿಸಿಕೊಳ್ಳುವಾಗ ಎದುರಾಗುವ (ಪಿತೃ ಪ್ರಧಾನತೆಯ ಮಹಿಳೆಯ ಚಿತ್ರಣವನ್ನು ನಿವಾರಿಸಿಕೊಳ್ಳುವಲ್ಲಿ) ಸಮಸ್ಯೆಗಳನ್ನು ಕುರಿತು ಚಿಂತಿಸಿದರು.

ಸಾಹಿತ್ಯಿಕವಾಗಿ ಮಹಿಳೆಯರಿಗೆ ಎದುರಾಗಬಹುದಾದ ಸಮಸ್ಯೆ ಸವಾಲುಗಳನ್ನು ಅಮೆರಿಕದ ಸ್ತ್ರೀವಾದಿಗಳು ವಿವರಿಸಿ ಮುಂದಿನ ದಾರಿಗಳ ಕುರಿತು ಚಿಂತನೆ ನಡೆಸಿದರಾದರೂ, ಈ ಫಲಿತಗಳನ್ನು ಜಗತ್ತಿನ ಎಲ್ಲ ಮಹಿಳೆಯರ ಸಾಹಿತ್ಯಕ ಚಟುವಟಿಕೆಗಳಿಗೂ ಅನ್ವಯಿಸಲು ಸಾಧ್ಯವಿಲ್ಲ ಎಂಬ ಪ್ರಶ್ನೆ ಇದೆ. ಏಕೆಂದರೆ ಮಹಿಳೆಯರ ಅಭಿವ್ಯಕ್ತಿಯು ಅವರವರ ಸಾಂಸ್ಕೃತಿಕ ಸಾಮಾಜಿಕ ಸಂದರ್ಭಗಳಿಂದ ನಿರ್ಧರಿಸಲ್ಪಡುತ್ತದೆ.

ಅಮೆರಿಕದ ಸ್ತ್ರೀವಾದಿಗಳ ಚಿಂತನೆಯನ್ನು ಸ್ವತಃ ಅಲ್ಲಿಯೇ ವಾಸವಾಗಿರುವ ಜನಾಂಗ ದ್ವೇಷಕ್ಕೊಳಗಾಗಿದ್ದ ಕಪ್ಪು ಸ್ತ್ರೀವಾದಿಗಳು ಬಿಳಿಯ ಸ್ತ್ರೀವಾದಿ ವಿಮರ್ಶೆಯನ್ನು

ಒಪ್ಪಲಿಲ್ಲ. ಅದೇ ರೀತಿ ಭಾರತದಲ್ಲಿಯೂ ಉತ್ತಮ ಜಾತಿ ವರ್ಗಗಳಿಗೆ ಸೇರಿದವರು ಅಮೆರಿಕದೊಂದಿಗೆ ಹೆಚ್ಚು ಸಂಪರ್ಕದಲ್ಲಿದ್ದುದರಿಂದ ಅಲ್ಲಿನ ಚಿಂತನಾಕ್ರಮವನ್ನೇ ಅನುಸರಿಸಿದ್ದಾರೆ ಎನ್ನಬಹುದು.

ಭಾರತದಲ್ಲಿ ನಡೆದ ಮಹಿಳಾ ಚಳುವಳಿಯು ವ್ಯಾಪಕ ಸ್ವರೂಪದ್ದಾಗಿರದೆ ಕೆಲವು ಸಂಘ ಸಂಸ್ಥೆಗಳನ್ನು ಕಟ್ಟಿಕೊಳ್ಳುವಷ್ಟಕ್ಕೆ ಸೀಮಿತವಾಯಿತು. ದೇಶದ ಎಲ್ಲ ಜಾತಿ, ವರ್ಗ, ಜನಾಂಗಗಳ ಮಹಿಳೆಯರನ್ನು ಒಳಗೊಂಡ ಮಹಿಳಾ ಪರಂಪರೆಯನ್ನು ಇದರಲ್ಲಿ ಸೇರಿಸಿಕೊಳ್ಳಬೇಕೆಂದು ಪ್ರಯತ್ನಿಸಿದರೂ, ಅನಕ್ಷರಸ್ಥರೇ ಹೆಚ್ಚಾಗಿರುವ, ಸಾಮಾಜಿಕವಾಗಿ ರೂಢಿಗತವಾದ ನಿಶ್ಚಿತ ಪಾತ್ರಗಳಲ್ಲಿ ಮಾತ್ರ ಬದುಕುತ್ತಿರುವ ಮಹಿಳೆಯರಿಗೆ ಈ ಚಳುವಳಿಯ ಅಸ್ತಿತ್ವದ ಅರಿವು ಕೂಡ ಇರಲಿಲ್ಲ.

ಹೀಗಾಗಿ ಭಾರತದಲ್ಲಿ ದಲಿತ ಮಹಿಳೆಯರು ಸ್ತ್ರೀವಾದಿ ಸಾಹಿತ್ಯ ಚಳುವಳಿಯಲ್ಲಿ ಭಾಗವಹಿಸಲು ಸಾಧ್ಯವಿರದ ಸ್ಥಿತಿ ಇದೆ. ದಲಿತ ಸ್ತ್ರೀಯರು ಆರ್ಥಿಕವಾಗಿ ಸ್ವಾವಲಂಬಿಗಳಲ್ಲದವರೂ ಹಾಗೂ ಶಿಕ್ಷಣದಲ್ಲಿಯೂ ಇಲ್ಲಿಯವರೆಗೆ ಅವಕಾಶ ವಂಚಿತರೂ ಆಗಿದ್ದವರು. ಈ ಕಾರಣದಿಂದ ದಲಿತ ಮಹಿಳೆಯರ ಸಾಹಿತ್ಯ ಗಮನಾರ್ಹ ಪ್ರಮಾಣದಲ್ಲಿಲ್ಲ. ವಿಮರ್ಶೆಯಂತೂ ಸಾಧ್ಯವೇ ಇಲ್ಲ ಎಂಬಂತಾಗಿದೆ. ಆದರೆ ದಲಿತ ಪುರುಷರು ಮಹಿಳಾ ಮೀಸಲಾತಿ ಮಸೂದೆಯನ್ನು ಬೆಂಬಲಿಸಿ ರಾಜಕೀಯ ಅಧಿಕಾರ ದೊರಕಿಸಿಕೊಡುವ ಪ್ರಯತ್ನ ನಡೆಸಿದ್ದಾರೆ.

**ಫ್ರಾನ್ಸಿನ ಸ್ತ್ರೀವಾದಿ ಚಿಂತನೆ:-**

ಫ್ರೆಂಚ್ ಸ್ತ್ರೀವಾದಿಗಳು ಜಗತ್ತಿನಲ್ಲಿ ಮೊದಲು ಸ್ತ್ರೀಯರ ಅಧೀನತೆಯ ಪ್ರಶ್ನೆಯನ್ನು ಎತ್ತಿದವರು ಎಂದು ಗುರುತಿಸಬಹುದು. ಕಾರ್ಮಿಕತೆ, ಶಿಕ್ಷಣ, ಉದ್ಯೋಗ ಮೊದಲಾದ ಎಲ್ಲ ಕ್ಷೇತ್ರಗಳಲ್ಲಿಯೂ ಲಿಂಗತಾರತಮ್ಯವನ್ನು ವಿರೋಧಿಸಿದರು. ಸಾಮಾಜಿಕ ನೀತಿ ನಿಯಮಗಳಷ್ಟೇ ಅಲ್ಲದೆ ಸಂಪ್ರದಾಯ, ಆಚರಣೆ, ರೂಢಿ, ಭಾಷೆಗಳ ನೆಲೆಯಲ್ಲಿಯೂ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣಿನ ದಮನಿತ ಅವಸ್ಥೆಯನ್ನು ಪ್ರತಿಭಟಿಸಿದರು. ಫ್ರೆಂಚ್ ಸ್ತ್ರೀವಾದಿಗಳು 'ವಿಮೆನ್ಸ್ ಲಿಬರೇಷನ್ ಮೂವ್‌ಮೆಂಟ್' ಎಂಬ ಸಂಸ್ಥೆಯ ಮೂಲಕ ಕ್ರಿಯಾಶೀಲವಾಗಿ ಹೋರಾಟಗಳಲ್ಲಿ ತೊಡಗಿದರು.

ಮಹಿಳಾ ವಿಮೋಚನೆಯ ಹೋರಾಟಗಳಿಗೆ ಅಗತ್ಯವಾಗಿದ್ದ ತಾತ್ತ್ವಿಕ ಚೌಕಟ್ಟನ್ನು ಅಲ್ಲಿನ ಬುದ್ಧಿಜೀವಿಗಳು ಒದಗಿಸಿದರು. ತತ್ತ್ವಶಾಸ್ತ್ರ, ಮನೋವಿಶ್ಲೇಷಣಾ ವಿಜ್ಞಾನ ಮತ್ತು ಭಾಷಾ ಸಂಕೇತ ಶಾಸ್ತ್ರಗಳನ್ನು ಆಧರಿಸಿ ವಿಶ್ಲೇಷಣಾ ಕ್ರಮಗಳನ್ನು ರೂಪಿಸಿದರು. ಹೆಲೆನ್ ಸಿಕ್ಸೂ, ಲ್ಯೂಸ್ ಇರಿಗೆರಿ, ಮೋನಿಕ್ ವಿಟ್ಟಿಗ್ ಮತ್ತು ಜೂಲಿಯ ಕ್ರಿಸ್ಟೇವಾ ಮುಂತಾದವರು ಜಾಕ್ ಡೆರಿಡಾ, ಲಕಾನ್, ಲೆವಿಸ್ಟ್ರಾಸ್, ಮಿಶೆಲ್ ಫ್ಯುಕೋ ಅವರುಗಳ ಸಿದ್ಧಾಂತಗಳ ಸ್ತ್ರೀವಾದಿ ಅಧ್ಯಯನ ನಡೆಸಿದರು.

ತತ್ತ್ವಶಾಸ್ತ್ರಗಳ ಚಿಂತನೆಯಲ್ಲಿ ಅದು ಪಾಶ್ಚಾತ್ಯ ದೇಶದಲ್ಲಿರಲಿ, ಪೂರ್ವ ದೇಶಗಳಲ್ಲಿರಲಿ ಕೇಂದ್ರದಲ್ಲಿರುವುದು ಪುರುಷನೇ. ಪುರುಷನಿಗೆ ಯಾವುದು ಸರಿ, ಯಾವುದು ತಪ್ಪು ಎಂಬುದರ ಜಿಜ್ಞಾಸೆಯನ್ನು ಪ್ರಪಂಚದ ಆಗುಹೋಗುಗಳ ಮೂಲಕ ತತ್ತ್ವಚಿಂತನೆಗಳು ಮಾಡಿವೆ. ಪುರುಷನೇ ಅಂತಿಮ ಎಂಬ ಭ್ರಮೆಯನ್ನು ಈ ಸಿದ್ಧಾಂತಗಳು ಕಟ್ಟಿವೆ. ಇಂತಹ ಭ್ರಮೆಯನ್ನು ತರ್ಕವನ್ನು ಭೇಧಿಸುವ ಮೂಲಕ ಹೊಸ ಸಿದ್ಧಾಂತಗಳನ್ನು ಕಟ್ಟಿಕೊಳ್ಳುವುದು ಸಾಧ್ಯ ಎಂದು ಫ್ರೆಂಚ್ ಸ್ತ್ರೀವಾದಿಗಳು ನಂಬಿದರು.

ಮನಃಶಾಸ್ತ್ರ ಮತ್ತು ಭಾಷಾಶಾಸ್ತ್ರಗಳ ವಿಶ್ಲೇಷಣೆಯನ್ನು ಫ್ರೆಂಚ್ ಸ್ತ್ರೀವಾದಿಗಳು ನಡೆಸಿದರು. 'ಜಾಕ್ ಲಕಾನ್‌ನ ಭಾಷೆ ಹಾಗೂ ಅದರ ಸಾಂಕೇತಿಕ ಕ್ರಮವೇ ಸಾರ್ವಜನಿಕ ಸಂವಾದದ ಜಗತ್ತು' ಎಂಬ ಚಿಂತನೆಯನ್ನು ಸ್ತ್ರೀವಾದ ಬಳಸಬಹುದು. ಸ್ತ್ರೀಯನ್ನು 'ಶಿಶ್ನರಹಿತ ಲಿಂಗ' ಎಂದು ನಿರ್ವಚಿಸಿಕೊಂಡ ಕೂಡಲೇ ಭಾಷೆಯಲ್ಲಿ ಸ್ತ್ರೀಗೆ ಇತ್ಯಾತ್ಮಕ ಸಂಕೇತ ಇಲ್ಲವಾಗುತ್ತದೆ. ಭಾಷೆಯ ಮುಂದುವರೆದ ಬಳಕೆಯಲ್ಲಿ ಅವಳಿಗೆ ಅಧಿಕೃತತೆ ಅಸ್ತಿತ್ವಗಳೂ ದಕ್ಕದಾಗುತ್ತದೆ. ಹೀಗೆ ಸ್ತ್ರೀ ಎಂದರೆ ಪುರುಷನು ಅಲ್ಲದ ಅಂಶ ಎಂಬ ನೇತ್ಯಾತ್ಮಕ ಸಂಕೇತವಷ್ಟೇ ಉಳಿಯುತ್ತದೆ. ಮನಶಾಸ್ತ್ರ ಹಾಗೂ ಭಾಷಾಶಾಸ್ತ್ರಗಳ ಜಗತ್ತಿನಲ್ಲಿ ಸ್ತ್ರೀ ಎನ್ನುವುದು ಒಂದು ಖಾಲಿ ಸ್ಥಳ, ಒಂದು ಮೌನ, ಅದೃಶ ಹಾಗೂ ಅಶ್ರುತ ಲಿಂಗ. ಇಲ್ಲಿ ಪುರುಷನು ತನಗೆ ಬೇಕೆನಿಸಿದ ಅಭಿಪ್ರಾಯಗಳನ್ನು ತುಂಬುತ್ತಾನೆ. ಇದು ಮಹಿಳೆಯ ಅಸ್ತಿತ್ವ ಹೇಗೆ ನಿರಾಕರಣೆಗೊಳ್ಳುತ್ತದೆ ಎಂಬುದನ್ನು ವಿವರಿಸಬಲ್ಲದು'.[14]

ನಿರಚನವಾದ ಮತ್ತು ಮನಃಶಾಸ್ತ್ರಗಳ ನೆಲೆಯಿಂದ ಕಂಡು ಬರುವ ಸ್ತ್ರೀಯ ಮೌನವನ್ನು ಸೃಷ್ಟಿಸಿರುವ ಪುರುಷ ಚಿಂತನೆಯ ವ್ಯವಸ್ಥಿತ ಭ್ರಮೆಗಳನ್ನು ಒಡೆಯುವ ಮೂಲಕ ಮಹಿಳೆ ಹೊಸದಾರಿಯನ್ನು ಕಂಡುಕೊಳ್ಳಬಹುದು. ಎಂದು ಫ್ರೆಂಚ್

ಸ್ತ್ರೀವಾದಿಗಳು ಚಿಂತಿಸಿದರು. ಲೂಯಿ ಇರಿಗೆರಿ, ಸೀಕ್ಸು, ಕ್ರಿಸ್ತೇವಾ ಮುಂತಾದವರು ಮಹಿಳೆಯರ ಅಸ್ತಿತ್ವದ ಮೂಲಗಳನ್ನು ಶೋಧಿಸುವ, ವಾಸ್ತವಿಕತೆಯನ್ನು ಕಟ್ಟಿಕೊಳ್ಳುವ ವಿಧಾನಗಳನ್ನು ಚಿಂತಿಸಿದರು.

ಮಹಿಳೆಯರ ವಿಮೋಚನೆಗೆ ಅವರ ಅಭಿವ್ಯಕ್ತಿಯೇ ಸಮರ್ಥ ಸಾಧನವಾಗಬಲ್ಲದೆಂಬುದನ್ನು ಇವರು ಮನಗಂಡರು. 'ಮಹಿಳೆಯರು ಇಂಥದೊಂದು ದಾರಿಯನ್ನು ಕಲ್ಪಿಸಿಕೊಳ್ಳುವುದು ಸುಲಭವಲ್ಲ. ಪ್ರಜ್ಞಾಪೂರ್ವಕವಾದ ಪ್ರಯತ್ನವನ್ನೇ ಮಾಡಬೇಕಾಗುತ್ತದೆ. ಈ ಅಭಿವ್ಯಕ್ತಿಯು ಪುರುಷ ಚಿಂತನೆಯ ಸೃಷ್ಟಿಯೇ ಆಗಿ ಬಳಕೆಯಲ್ಲಿರುವ ಭಾಷೆಯನ್ನು ನೆಚ್ಚುವುದು ಸಾಧ್ಯವಿಲ್ಲ. ಬದಲಿಗೆ ತನ್ನದೇ ಅಗತ್ಯಗಳಿಗೆ ಸೂಕ್ತವಾದ ಪರಿಕಲ್ಪನೆಗಳು, ಹೊಸಬಗೆಯ ಪ್ರತಿನಿಧೀಕರಣ, ಪದಗಳ ಪ್ರಯೋಗಗಳ ಶೋಧ ಹಾಗೂ ಪರಿಷ್ಕರಣಗಳಂತಹ ವಿವರಗಳಿಗೆ ಗಮನ ಕೊಡುವ ಮೂಲಕ ಹೆಣ್ಣಿನ ಭಾಷೆಯೊಂದನ್ನು ಕಲ್ಪಿಸುವ ಅಗತ್ಯವಿದೆ'.[15] ತನ್ನದೇ ಆದ ಭಾಷೆಯಲ್ಲಿ ಹೆಣ್ಣು ಮಾತನಾಡಿದಾಗ ಪುರುಷರು ಮಹಿಳೆಯರೊಂದಿಗೆ ಸಂವಾದ ನಡೆಸಲೇಬೇಕಾಗುತ್ತದೆ. ಆ ಮೂಲಕ ಭಾಷಾ ಸಂಕಥನದಲ್ಲಿ ಮಹಿಳೆ ಮತ್ತು ಪುರುಷರಿಬ್ಬರೂ ಸಮಾನವಾಗಿ ಭಾಗಿಗಳಾಗಬಹುದು ಎಂದು ಫ್ರೆಂಚ್ ಸ್ತ್ರೀವಾದಿಗಳ ಅಭಿಪ್ರಾಯ.

ಫ್ರೆಂಚ್ ಸ್ತ್ರೀವಾದಿಗಳ ಚಿಂತನೆಯ ಮತ್ತೊಂದು ಮಹತ್ವವೆಂದರೆ ಸಾಹಿತ್ಯ ವಿಮರ್ಶೆಯ ವಿಧಾನಗಳನ್ನು ಚಿಂತಿಸುತ್ತಾ ಕೇವಲ ಬೌದ್ಧಿಕ ಚಿಂತನೆಗಳ ಮಟ್ಟಕ್ಕೆ ಸೀಮಿತವಾಗಿ, ಮಹಿಳಾ ಹೋರಾಟಗಳ ಕ್ರಿಯಾಶೀಲತೆಗೂ, ಚಿಂತನೆಗೂ ನಡುವೆ ಅಪಾರ ಅಂತರ ನಿರ್ಮಾಣವಾಗುತ್ತದೆ ಎಂಬ ಕೂಗು ಜಗತ್ತಿನಾದ್ಯಂತ ಕೇಳಿಬರುತ್ತಿತ್ತು. ಇಂತಹ ಸಂದರ್ಭದಲ್ಲಿ ಮಹಿಳೆಯ ಸೃಜನಶೀಲ ಸಾಹಿತ್ಯಕ್ಕೆ ಒಂದು ಹೊಸ ಆಯಾಮ ನೀಡುವ ಪ್ರಸ್ತಾಪಗಳನ್ನು ಮುಂದಿರಿಸಿದ್ದರಿಂದ ಮಹಿಳಾ ಹೋರಾಟಕ್ಕೂ ಚಲನಶೀಲತೆಯನ್ನು ನೀಡಿದಂತಾಯಿತು. ಈ ಹಿನ್ನೆಲೆಯಲ್ಲಿ ಫ್ರಾನ್ಸ್‌ನ ಮಹಿಳಾ ಚಳುವಳಿಗಳು ಮುಖ್ಯವಾಗಿವೆ.

ಸ್ತ್ರೀವಾದದ ಹಲವು ಚಿಂತನೆಗಳು ಹೀಗೆ ಮಂಡಿತವಾಗಿವೆಯಾದರೂ ಜಗತ್ತಿನಾದ್ಯಂತ ಎಲ್ಲ ಮಹಿಳೆಯರಿಗೂ ಏಕಕಾಲದಲ್ಲಿ ಅನ್ವಯಿಸಬಹುದಾದ ಸಿದ್ಧಾಂತವನ್ನು ಕಲ್ಪಿಸಲು ಸಾಧ್ಯವಿಲ್ಲ. ಮಹಿಳಾ ಸಮುದಾಯವು ಒಂದೇ ಪ್ರಕಾರದ್ದಾಗಿರದೆ ಜಾತಿ, ಧರ್ಮ, ವಿದ್ಯಾವಂತರು, ಅವಿದ್ಯಾವಂತರು, ಗ್ರಾಮೀಣ,

ನಗರ ಎಂಬ ಹಲವು ಸ್ತರಗಳಲ್ಲಿ ಹಂಚಿ ಹೋಗಿದೆ. ಆದರೂ ಜಗತ್ತಿನಾದ್ಯಂತ ಪಿತೃಪ್ರಧಾನತೆಯೇ ಇರುವುದರಿಂದ ಎಲ್ಲ ಮಹಿಳೆಯರಿಗೂ ಸಮಾನ ಸಮಸ್ಯೆಗಳೂ ಇವೆ. ಹಾಗೂ ಆಯಾ ಸಾಮಾಜಿಕ ಹಿನ್ನೆಲೆಯ ಸಮಸ್ಯೆಗಳೂ ಇವೆ. ಈ ಎರಡೂ ಅಂಶಗಳನ್ನು ಗಮನಿಸಿಯೇ ಮಹಿಳಾ ಅಧ್ಯಯನಗಳು ಸಾಗಿ, ತಮ್ಮ ತಾತ್ತ್ವಿಕ ನಿಲುವುಗಳನ್ನು ಸ್ಪಷ್ಟಪಡಿಸಿಕೊಳ್ಳಬೇಕಾಗಿದೆ.

ಮೇಲಿನ ಮಾತುಗಳು ಸ್ತ್ರೀವಾದದ ಚಳುವಳಿಗಳು ಮಹಿಳೆಯ ಅನುಭವವನ್ನು ಅವಲಂಬಿಸಿ ಬೆಳೆಯಬೇಕೆಂಬುದನ್ನು ಪರೋಕ್ಷವಾಗಿ ಹೇಳುತ್ತವೆ. 'ಸ್ತ್ರೀವಾದಿಗಳು ತಮ್ಮ ಹೋರಾಟದ ರಾಜಕೀಯ ಆಕರವನ್ನಾಗಿ ಬಳಸಿಕೊಳ್ಳಬಹುದಾದ್ದು ಒಂದು ಶುದ್ಧ ವಾಸ್ತವಿಕತೆಯನ್ನಲ್ಲ, ಸಾರ್ವತ್ರಿಕ ಸಾರ್ವಕಾಲಿಕ ವಾಸ್ತವತೆಯನ್ನೂ ಅಲ್ಲ. ಬದಲಾಗಿ ತಮ್ಮ ಅನುಭವಗಳ ಚಾರಿತ್ರಿಕ ವ್ಯಾಖ್ಯಾನವನ್ನು ಎನ್ನುವ ಅಂಶವನ್ನು ಸದಾ ನೆನಪಿನಲ್ಲಿರಿಸಿಕೊಳ್ಳುವುದು ಅಗತ್ಯ. ಸ್ತ್ರೀವಾದದಿಂದ ಸಾಧ್ಯವಾಗಬಹುದಾದ ಮೂಲ ಜಿಜ್ಞಾಸಿಕ ಬದಲಾವಣೆಯು ಮಹಿಳೆಯರ ಅನುಭವದ ವ್ಯಾಖ್ಯಾನವನ್ನು ಗಾಢವಾಗಿ ಅವಲಂಬಿಸಿದೆ; ಈ ವ್ಯಾಖ್ಯಾನ ದೈನಿಕದ ಬದುಕಿನ ವಿಮರ್ಶೆಯನ್ನಲ್ಲದೆ ತಾವು ಜಗತ್ತನ್ನು ಗ್ರಹಿಸುವುದಕ್ಕಾಗಿ ಬಳಸುವ ವರ್ಗೀಕರಣ ಪದಗಳ (ಕ್ಯಾಟಗರೀಸ್) ವಿಮರ್ಶೆಯನ್ನು ಸಾಧ್ಯ ಮಾಡಬೇಕು'.[16]

ಕನ್ನಡದ ಸ್ತ್ರೀವಾದಿ ಚಿಂತಕಿಯರು ಸಹ ಮಹಿಳೆ ತನ್ನ ಅನುಭವಗಳನ್ನು ದಾಖಲಿಸುವ ಮೂಲಕ, ತಾನು ಅಭಿವ್ಯಕ್ತಿಗಾಗಿ ಬಳಸುವ ಪ್ರತ್ಯೇಕ ರೀತಿಯ ಭಾಷೆಯೇ ಸ್ತ್ರೀವಾದದ ಗುರಿಯಾದ ಮಹಿಳಾ ವಿಮೋಚನೆಗೆ ಅಥವಾ ಲಿಂಗ ಸಮಾನತೆಯ ಕಡೆಗೆ ಚಲಿಸಲು ಉತ್ತಮ ಸಾಧನ ಎಂಬುದನ್ನು ಎತ್ತಿಹಿಡಿದಿದ್ದಾರೆ. ಈ ದಿಸೆಯಲ್ಲಿ ಮಹಿಳೆಯರ ಸೃಜನಶೀಲ ಸಾಹಿತ್ಯದ ಆಯಾಮಗಳು ಬದಲಾಗುತ್ತಿರುವುದನ್ನು ಗಮನಿಸಬಹುದಾಗಿದೆ.

ಅಡಿಟಿಪ್ಪಣಿ:

1. ಸಂ. ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ, ಸ್ತ್ರೀವಾದಿ ಸಾಹಿತ್ಯ ವಿಮರ್ಶೆ 'The writings of Cornelia Sorabji, Pandith Ramabai and others in women writing in India'ದಿಂದ ಉದ್ಧರಿಸಲಾಗಿದೆ. ಕ್ರೈಸ್ಟ್ ಕಾಲೇಜು ಕನ್ನಡ ಸಂಘ, ಬೆಂಗಳೂರು, 1994, ಪುಟ 16
2. ಅದೇ. 'ಮಹಿಳೆ ಬಿಡುಗಡೆಯ ಹಾದಿಯಲ್ಲಿ' ಗ್ರಂಥದಿಂದ ಉದ್ಧರಿಸಲಾಗಿದೆ. ಪುಟ 16
3. ಅದೇ. ಪುಟ 17
4. ಸಿ.ಎನ್. ರಾಮಚಂದ್ರನ್, ಸಾಹಿತ್ಯ ವಿಮರ್ಶೆ, ಕರ್ನಾಟಕ ಸಾಹಿತ್ಯ ಅಕಾಡೆಮಿ ಮೂರನೇ ಆವೃತ್ತಿ (ಪರಿಷ್ಕೃತ) 2000, ಪುಟ 85
5. ಅದೇ. ಪುಟ 87
6. ಎಚ್.ಎಸ್. ಶ್ರೀಮತಿ ಸ್ತ್ರೀವಾದ, ಪ್ರಸಾರಾಂಗ, ಹಂಪಿ ಕನ್ನಡ ವಿಶ್ವ ವಿದ್ಯಾಲಯ, 2003, ಪುಟ 28
7. ಅದೇ. ಪುಟ 31
8. ಅದೇ. ಪುಟ 32
9. ಅದೇ. ಪುಟ 32–33
10. ಅದೇ. ಪುಟ 41
11. ಅದೇ. ಪುಟ 43
12. ಅದೇ. ಪುಟ 44
13. ಅದೇ. ಪುಟ 54
14. ಸಂ. ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ, ಪೂರ್ವೋಕ್ತ, ಪುಟ 53

ಅಧ್ಯಾಯ : 2

# ಕನ್ನಡ ಮಹಿಳಾ ಕಾವ್ಯದ ಸ್ಥಿತ್ಯಂತರಗಳು

ಕನ್ನಡ ಮಹಿಳಾ ಕಾವ್ಯದ ಇತಿಹಾಸದಲ್ಲಿ ಮೊದಲಿಗೆ ನಾವು ಗುರುತಿಸಬಹುದಾದದ್ದು ಜನಪದರ ಹಾಡುಗಳು. ಹೆಂಗಸರೇ ರಚಿಸಿರಬಹುದಾದ ಹಾಡುಗಳು, ಕಥನಗೀತೆಗಳು ಹೆಣ್ಣುಮಕ್ಕಳ ನೋವು ನಲಿವುಗಳನ್ನು ದಾಖಲಿಸಿವೆ. ಮೌಖಿಕವಾಗಿಯೇ ಉಳಿದು ಬಂದ ಜನಪದ ಕಾವ್ಯವಾಗಲೀ, ಗ್ರಂಥರೂಪದಲ್ಲಿ ಬೆಳೆದುಬಂದಿರುವ ಶಿಷ್ಟಕಾವ್ಯವಾಗಲೀ, ಅವುಗಳಲ್ಲಿ ಆಯಾ ಕಾಲಘಟ್ಟದಲ್ಲಿ ಹೆಣ್ಣು ತಾನು ಬದುಕುತ್ತಿರುವ ಸಂದರ್ಭ, ಸನ್ನಿವೇಶ ಹಾಗೂ ಅವಳು ಆ ವ್ಯವಸ್ಥೆಗೆ ಪ್ರತಿಕ್ರಿಯೆ ನೀಡಿದ ರೀತಿ ಮುಖ್ಯವಾಗುತ್ತದೆ.

ಜನಪದ ಹೆಣ್ಣುಮಕ್ಕಳು ಕಟ್ಟಿರಬಹುದಾದಂತಹ ಗರತಿಯರ ಹಾಡುಗಳು ತಮ್ಮ ಕೆಲಸದ ಆಯಾಸವನ್ನು ಕಡಿಮೆ ಮಾಡಿಕೊಳ್ಳಲು ಕುಟ್ಟುವಾಗ, ಬೀಸುವಾಗ ಹಾಡಿಕೊಳ್ಳುವಂತಹವಾಗಿದ್ದವು. 'ಈ ಹಾಡುಗಳ ಒಳಹೊಕ್ಕು ನೋಡಿದಾಗ ಸ್ತ್ರೀಯರ ನೋಟವೇ ಬೇರೆ, ಅವರ ಹಾಡೇ ಬೇರೆ, ಅವರ ಕಾಳಜಿಗಳೇ ಬೇರೆ ಎಂಬ ಅಂಶವನ್ನು ಸಮರ್ಥಿಸಲು ಬೇಕಾದಷ್ಟು ಉದಾಹರಣೆಗಳು ಸಿಗುತ್ತವೆ. ಪುರುಷ ಜಗತ್ತು ವೈಭವೀಕರಿಸಿದ, ಪ್ರತಿಪಾದಿಸಿದ, ಎತ್ತಿಹಿಡಿದ ಯಾವ ಮೌಲ್ಯ ಆದರ್ಶಗಳನ್ನೂ ಸ್ತ್ರೀಯರು ಪುರಸ್ಕರಿಸಿಲ್ಲ ಎಂಬ ಅಚ್ಚರಿ ಇಲ್ಲಿ ಕಾಣುತ್ತದೆ. ಉದಾಹರಣೆಗೆ ತಾಯ್ತನ ಪಾತಿವ್ರತ್ಯಗಳಿಗೆ ಸಂಬಂಧಿಸಿದಂತೆ ಏನೇನು ಹೇಳಿಕೊಂಡಿದ್ದಾಳೆ ಎಂದು ಹುಡುಕಿದರೆ ಬೆರಳೆಣಿಕೆಯಷ್ಟು ತ್ರಿಪದಿಗಳು ಸಿಗುವುದಿಲ್ಲ. ಇದಕ್ಕೆ ಪ್ರತಿಯಾಗಿ ಆಕೆ ಗಂಡಿನ ರಸಿಕತೆಯನ್ನು, ಪುರುಷರ ಅಂದ ಚೆಂದವನ್ನು, ಪ್ರೇಮ ಪ್ರೀತಿಗಳನ್ನು ವರ್ಣಿಸಿರುವ ಹಾಡುಗಳೇ ಹೆಚ್ಚು. ಆಕೆಗೆ ಪಾತಿವ್ರತ್ಯ ಶೀಲಗಳಂತಹ ಅಸಂಗತ ಆದರ್ಶಗಳಿಗಿಂತ ವಾಸ್ತವ ಬದುಕಿನ ಕಷ್ಟ-ಸುಖಗಳೇ ಹೆಚ್ಚು ಮುಖ್ಯವಾಗಿರುತ್ತವೆ'.[1] ಹೀಗೆ ಜನಪದ ಮಹಿಳೆಯ ಸ್ವತಂತ್ರ ಆಲೋಚನೆಯನ್ನು ಗುರುತಿಸಬಹುದು.

ಜನಪದ ಸಂಪ್ರದಾಯದಲ್ಲಿ ಹೆಣ್ಣಿನ ಪ್ರತಿಭಟನೆ ವ್ಯಕ್ತವಾಗಿರುವುದನ್ನು ವಿಜಯಾ ದಬ್ಬೆಯವರು 'ಶ್ರುತಿ ಸಂಪ್ರದಾಯದಲ್ಲಿ ಮಹಿಳೆಯರದೆನ್ನಬಹುದಾದ ಅಭಿವ್ಯಕ್ತಿ ಪರಂಪರೆಯಲ್ಲಿ ಸಾಮಾನ್ಯವಾಗಿ ಪ್ರತಿಭಟನೆಯನ್ನು ಹಿಂದಕ್ಕೆಳೆಯುವ ಅಂಶಗಳು ಸಾಕಷ್ಟಿವೆಯಾದರೂ ಹೊರಗೆ ದುಡಿಯುವ ಗ್ರಾಮೀಣ ಹೆಣ್ಣಿನ ಆತ್ಮವಿಶ್ವಾಸದ ಸಹಜ

ದನಿಯಲ್ಲಿ ಪ್ರತಿಭಟನೆಯ ಸತ್ವ ಅಲ್ಲಲ್ಲಿ ಕಾಣಿಸಿದೆ. 'ಬಾಳುವೆಗೆಟ್ಟು ಮತಿಗೆಟ್ಟು ಬಾಳಿದರೆ ಹೆತ್ತವರ ಕುಲಕೆ ಹಗೆಯಾದೆ' ಎಂಬ ಸದಾ ಚುಚ್ಚುವ ಎಚ್ಚರದಲ್ಲಿ 'ಅತ್ತೆಯ ಮನೆಯಲ್ಲಿ ಹತ್ತಾರು ಬೈಗಳು ಉತ್ತರ ಬೇಡ ನನಮಗಳೆ' ಎಂಬ ಅಭಿವ್ಯಕ್ತಿಯನ್ನು ಹತ್ತಿಕ್ಕುವ ಸತತ ಯತ್ನದ ನಡುವೆ 'ಮಾರಾಯ್ನ ಬಿಸಿಲ ವರತೆಂಗ' ಎಂದು ಗಂಡನನ್ನು ಬಣ್ಣಿಸುವುದಾಗಲಿ 'ಬಿಟ್ಟಾಡಿಕೊಳ್ಳುವ ವೈರೀಯ ಮನಿಮುಂದ ಬಿಚ್ಚುಗತ್ತ್ಯಾಗಿ ಹೊಳೆದೇನಾ' ಎಂಬ ದಿಟ್ಟತನವಾಗಲಿ 'ಬಾಳೆ ಕಡಿದಾರೆ ತೋಟ ಹಾಳಾಗಬಲ್ಲದೆ ಬಾಳಿಸಲಾರದೆ ಮಡದೀಯ ಬಿಟ್ಟಾರೆ ಬಾಳೆಹಣ್ಣೇನೆ ಕೊಳೆಯಾಕೆ' ಎಂಬ ಸವಾಲಾಗಲೀ ಸ್ವತಂತ್ರವಾದ, ಕೆಚ್ಚಿನ ಮನೋಭಾವವಿಲ್ಲದೆ ಬರುವಂಥದಲ್ಲ'. [2] ಎಂದು ಗುರುತಿಸುತ್ತಾರೆ. ಈ ಹೇಳಿಕೆಯು ನಿದರ್ಶನಸಹಿತವಾಗಿ ಜನಪದ ಸ್ತ್ರೀಯರು ತಮ್ಮ ಅನುಭವಗಳನ್ನು ಮುಕ್ತವಾಗಿ ಹೇಳಿಕೊಳ್ಳಲಾಗದಿದ್ದರ ಬಗೆಗೆ, ತಮ್ಮ ಬದುಕಿನ ಸಂತೋಷಗಳ ಬಗೆಗೆ, ಅನಿವಾರ್ಯ ಸಂದರ್ಭಗಳಲ್ಲಿ ತನ್ನ ರೋಷವನ್ನು ಇಂತಹ ಹಾಡುಗಳಲ್ಲಿ ವ್ಯಕ್ತಪಡಿಸಿದ್ದಾಳೆ. ಒಟ್ಟು ಜನಪದ ಸಂಪ್ರದಾಯದಲ್ಲಿ ಹೆಣ್ಣು ನಂಬಿಕೆ ಆಚಾರವಿಚಾರಗಳ ಚೌಕಟ್ಟಿನಲ್ಲಿ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಬದುಕಬೇಕಾಗಿತ್ತೆನ್ನುವುದನ್ನು ಗಮನಿಸಬಹುದು.

ಜನಪದ ಹೆಣ್ಣುಮಕ್ಕಳ ಹಾಡುಗಳಿಗೆ ಕಾಲದ ಗೆರೆಯನ್ನು ಹಾಕಲು ಸಾಧ್ಯವಿಲ್ಲ. ಆದರೆ ಶಿಷ್ಟ ಸಾಹಿತ್ಯದಲ್ಲಿ ವಚನ ಚಳುವಳಿಯವರೆಗೆ ಯಾವುದೇ ಮಹಿಳೆ ಸಾಹಿತ್ಯ ರಚಿಸಿರುವುದನ್ನು ಕಾಣಲಾಗಿಲ್ಲ. ಅಕ್ಕಮಹಾದೇವಿಯೇ ಮೊದಲ ಮಹಿಳಾ ಕವಿಯಾಗಿ ಕಂಡು ಬರುತ್ತಾಳೆ. ತನ್ನ ವಚನಗಳಲ್ಲಿಯೇ ತನ್ನ ಜೀವನದ ವಿವರಗಳನ್ನು ಸೂಚ್ಯವಾಗಿ ದಾಖಲಿಸಿರುವ ಈಕೆ ಸಮಾಜವು ನಿಗದಿಪಡಿಸಿದ್ದ ಮದುವೆ ಎಂಬ ಸಂಸ್ಥೆಯನ್ನು ಧಿಕ್ಕರಿಸಿ ಭಿನ್ನವಾದ ಬದುಕನ್ನು ಆಯ್ಕೆ ಮಾಡಿಕೊಂಡವಳು. ಅಲ್ಲಮ ಮತ್ತು ಬಸವಣ್ಣನವರಂತಹ ಸಾಧಕರೊಂದಿಗೆ ಸಂವಾದ ನಡೆಸಿ ಅವರ ಹರಿತವಾದ ಪ್ರಶ್ನೆಗಳಿಗೆ ಉತ್ತರಿಸಿದವಳು ಚನ್ನಮಲ್ಲಿಕಾರ್ಜುನನನ್ನು ಅಲೌಕಿಕ ಪತಿಯಾಗಿ ಸ್ವೀಕರಿಸಿದ ಇವಳೂ ಪಾತಿವ್ರತ್ಯದಂತಹ ಮೌಲ್ಯವನ್ನು ಎತ್ತಿಹಿಡಿದವಳು. ಆದರೂ ವೈವಾಹಿಕ ಚೌಕಟ್ಟಿನಿಂದಾಚೆ ಆಧ್ಯಾತ್ಮಿಕ ವಲಯದಲ್ಲಿ ಅಲ್ಲಮ, ಬಸವಣ್ಣವನವರಿಗೆ ಸಮಾನವಾದ, ಇನ್ನೂ ಉತ್ತಮವಾದ ಸ್ಥಾನಗಳಿಸಿದ್ದು ಕ್ರಾಂತಿಕಾರಕವಾಗಿ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಕಂಡಿದೆ.

ವಚನ ಚಳುವಳಿಯು ಉಚ್ಛ್ರಾಯ ಸ್ಥಿತಿಯಲ್ಲಿರುವಾಗ ಹಲವಾರು ಮಹಿಳೆಯವರು ವಚನಗಳನ್ನು ರಚಿಸಿದರಾದರೂ ಅನಂತರದ ಕೆಲವು ಶತಮಾನಗಳಲ್ಲಿ ಮಹಿಳೆಯರು ಸಾಹಿತ್ಯಿಕ ಚಟುವಟಿಕೆಗಳಲ್ಲಿ ತೊಡಗಿರುವುದು ಕಂಡು ಬರುವುದಿಲ್ಲ. ಹದಿನೇಳನೆಯ ಶತಮಾನದಲ್ಲಿ ಸಂಚಿ ಹೊನ್ನಮ್ಮ 'ಹದಿಬದೆಯ ಧರ್ಮ' ಎಂಬ ಗ್ರಂಥವನ್ನು

ಬರೆದಿರುವಳು. ಚಿಕ್ಕದೇವರಾಯನ ಆಸ್ಥಾನದಲ್ಲಿದ್ದ ಈಕೆಯ ಕೃತಿಯಲ್ಲಿ ಹೆಣ್ಣು ಪತಿಯನ್ನು, ಪತಿಯ ತಂದೆ, ತಾಯಿ, ಬಂಧುಗಳನ್ನು ಹೇಗೆ ಪಾಲಿಸಬೇಕು ಎಂಬುದನ್ನು ಹಾಗೂ ಪತಿವ್ರತೆಯ ಗುಣಲಕ್ಷಣಗಳನ್ನು ವಿವರವಾಗಿ ತಿಳಿಸಿದ್ದಾಳೆ. ಈ ಕೃತಿಯು ಹೆಣ್ಣಿನ ಜನ್ಮವೇ ಪತಿಗಾಗಿ ಎಂಬ ತಿಳುವಳಿಕೆಯನ್ನು ಹೆಣ್ಣು ಮಕ್ಕಳಿಗೆ ನೀಡುತ್ತಿದ್ದರೂ ಒಮ್ಮೆಯಾದರೂ ಹೆಣ್ಣು ಗಂಡುಗಳಲ್ಲಿರುವ ತಾರತಮ್ಯದ ಬಗ್ಗೆ ಪ್ರಶ್ನಿಸಿರುವ ಕಾರಣಕ್ಕಾಗಿ ಮುಖ್ಯವಾಗಿ ಕಂಡಿದೆ. 'ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ, ಪೆಣ್ಣಲ್ಲವೆ ಪೊರೆದವಳು' ಎಂದು ಸೃಷ್ಟಿಕ್ರಿಯೆಯಲ್ಲಿ ಹೆಣ್ಣಿನ ಪಾತ್ರ ಮುಖ್ಯವಾಗಿರುವುದನ್ನು ಸೂಚಿಸಿ, 'ಕುವರನಾದೊಡೆ ಬಂದ ಗುಣವೇನದರಿಂದ, ಕುವರಿಯಾದೊಡೆ ಕುಂದೇನು' ಎಂದು ಪ್ರಶ್ನಿಸಿದ್ದಾಳೆ.

ಸಂಚಿ ಹೊನ್ನಮ್ಮನ ಜೊತೆ ಜೊತೆಯಲ್ಲಿಯೇ ಸಾಹಿತ್ಯ ರಚಿಸಿದ ಶೃಂಗಾರಮ್ಮನನ್ನು ಹೊರತುಪಡಿಸಿದರೆ ಹದಿನೆಂಟನೆಯ ಶತಮಾನದಲ್ಲಿ ಹೆಳವನಕಟ್ಟೆ ಗಿರಿಯಮ್ಮ, ಹತ್ತೊಂಭತ್ತನೆಯ ಶತಮಾನದಲ್ಲಿ ಹರಪನಹಳ್ಳಿ ಭೀಮವ್ವ, ಯದುಗಿರಿಯಮ್ಮ ಮುಂತಾದವರು ಸಾಹಿತ್ಯ ರಚನೆಯಲ್ಲಿ ತೊಡಗಿದರು. ಒಟ್ಟಾರೆಯಾಗಿ ಸಂಚಿ ಹೊನ್ನಮ್ಮನ ನಂತರದ ಅವಧಿಯಲ್ಲಿ ಸೃಷ್ಟಿಯಾದ ಸಾಹಿತ್ಯದ ಬಗೆಗೆ 'ಈ ಅವಧಿಯ ಬಹಳಷ್ಟು ಕವಯತ್ರಿಯರು ಕಾವ್ಯದ ವಸ್ತುವಿಗಾಗಿ ಹುಡುಕಾಟ ನಡೆಸದೆ ಸಿದ್ಧವಸ್ತುವಿಗೇ ಮೊರೆ ಹೋಗಿದ್ದರಿಂದ ರುಕ್ಮಿಣೀ ಕಲ್ಯಾಣ, ವರನಂದೀ ಕಲ್ಯಾಣ, ರತಿ ಕಲ್ಯಾಣ, ಸೀತಾ ಕಲ್ಯಾಣ ಹೀಗೆ ಕಲ್ಯಾಣ ಕೃತಿಗಳೇ ಅಡಿಗಡಿಗೆ ದೊರೆಯುತ್ತವೆ. ಪಾರಿಜಾತಪಹರಣ, ದ್ರೌಪದೀ ವಸ್ತ್ರಾಪಹರಣ ಮೊದಲಾದ ಪ್ರಸಂಗಗಳನ್ನಾಧರಿಸಿ ಕೃತಿಗಳು ದೇವರನಾಮಗಳು ಕೀರ್ತನೆಗಳೇ ಈ ಅವಧಿಯ ಸಾಹಿತ್ಯದ ವಸ್ತುಗಳಾಗಿದ್ದು ವೈವಿಧ್ಯತೆಗೆ ಅವಕಾಶವಿಲ್ಲವಾಗಿದೆ'.[3] ಎಂದು ಹೇಳಿರುವುದು ಸಾಹಿತ್ಯದಲ್ಲಿ ಗಮನಾರ್ಹವಾದುದು ರಚಿಸಲ್ಪಡಲಿಲ್ಲ ಎಂಬುದನ್ನು ತಿಳಿಸುತ್ತದೆ.

ಇಪ್ಪತ್ತನೇ ಶತಮಾನದ ಮೊದಲಾರ್ಧವನ್ನು ಕನ್ನಡ ಆಧುನಿಕ ಮಹಿಳಾ ಸಾಹಿತ್ಯದ ಆರಂಭದ ಕಾಲವೆಂದು ಗುರುತಿಸಲಾಗುತ್ತದೆ. ಈ ಅವಧಿಯಲ್ಲಿ ಹಲವಾರು ಲೇಖಕಿಯರು ಮುಂದೆ ರೂಪುಗೊಳ್ಳಲಿರುವ ಸಮೃದ್ಧ ಮಹಿಳಾ ಸಾಹಿತ್ಯಕ್ಕೆ ಬುನಾದಿಯನ್ನು ಹಾಕಿದರೆನ್ನಬಹುದು. ಆರಂಭದ ಲೇಖಕಿಯೆಂದು ಗುರುತಿಸಲಾಗುವ ತಿರುಮಲಾಂಬ ಅವರ ನಂತರ ಬೆಳಗೆರೆ ಜಾನಕಮ್ಮ, ತಿರುಮಲೆ ರಾಜಮ್ಮನವರನ್ನು ಮಹಿಳಾ ಕವಿಗಳೆಂದು ಗುರುತಿಸಬಹುದು.

ತಿರುಮಲಾಂಬ ಅವರು ಕಾವ್ಯ, ನಾಟಕ, ಯಕ್ಷಗಾನ, ಪ್ರಬಂಧ, ಜೀವನ ಚರಿತ್ರೆ, ಸಣ್ಣಕಥೆ ಹೀಗೆ ಹಲವು ಪ್ರಕಾರಗಳಲ್ಲಿ ಕೃತಿಗಳನ್ನು ರಚಿಸಿದರು. ಕಾದಂಬರಿ ಪ್ರಕಾರದಲ್ಲಿ ಹೆಚ್ಚಿನ ಆಸಕ್ತಿ ಹೊಂದಿದ್ದ ಇವರು ಸ್ತ್ರೀಶಿಕ್ಷಣದಿಂದ ಮಹಿಳೆಯ ಉದ್ಧಾರ ಸಾಧ್ಯ ಎಂದು ತಿಳಿದಿದ್ದರು. ವಿಧವಾವಿವಾಹವನ್ನು ಒಪ್ಪಲಿಲ್ಲವಾದರೂ ವಿಧವೆಯರ ಜೀವನದ ಕಷ್ಟಗಳನ್ನು, ಎದುರಿಸಬೇಕಾಗಿದ್ದ ಅನ್ಯಾಯಗಳನ್ನು ತಮ್ಮ ಕೃತಿಗಳಲ್ಲಿ ತೋರಿದರು. ಅವರು ಬರೆದ ಸಾಹಿತ್ಯ ಹಾಗೂ ಆರಂಭಿಸಿದ 'ಸತೀ ಹಿತೈಷಿಣಿ' ಗ್ರಂಥಮಾಲೆಯ ಪ್ರಕಾಶನದ ಕೆಲಸಗಳಿಂದ ಅವರು ಸ್ಮರಣೀಯರೆನಿಸಿದ್ದಾರೆ. ತಿರುಮಲಾಂಬ ಅವರ ಕಾವ್ಯ ಭಗವಂತನ ಸ್ತುತಿ, ಪ್ರಾರ್ಥನೆ, ಶರಣಾಗತಿಪರ ಕೀರ್ತನೆಗಳನ್ನು ಒಳಗೊಂಡಿತ್ತು.

ಬೆಳಗೆರೆ ಜಾನಕಮ್ಮನವರು ತಮ್ಮ ಸಹಜ ಕವಿತಾಶಕ್ತಿಯಿಂದ ಗಮನ ಸೆಳೆಯುವ ಕವಿಯೆಂದು ಗುರುತಿಸಲಾಗುತ್ತದೆ. 'ಜಾನಕಮ್ಮ ತಮ್ಮ ಕವಿತೆಗಳಲ್ಲಿ ಬದುಕಿನ ಎಲ್ಲ ನೋವು, ನಲಿವು, ಬೇಸರ, ಬವಣೆ, ಅಡಚಣೆಗಳನ್ನು ನಿಸ್ಸಂಕೋಚವಾಗಿ ತೆರೆದಿಟ್ಟಿದ್ದಾರೆ. ಜಾನಕಮ್ಮನ ಬದುಕು, ಅಂದಿನ ಓರ್ವ ಸಾಮಾನ್ಯ ಹೆಣ್ಣಿನ ಅನುಭವಗಳಿಂದ ಬೇರೆಯಾಗಿರಲಿಲ್ಲ. ಹೀಗಾಗಿ ಅವರ ಕವನಗಳು ಸ್ತ್ರೀಸಂವೇದನೆಯ ಅಪ್ಪಟ ಸಾಕ್ಷಿಗಳೆಂದರೆ ತಪ್ಪಲ್ಲ'[4] ಎನ್ನುವ ಮಾತುಗಳು ಬೆಳಗೆರೆ ಜಾನಕಮ್ಮನವರು ಆ ಕಾಲಕ್ಕೆ ಅಷ್ಟು ಸಂವೇದನಾಶೀಲರಾಗಿ ಕವಿತೆಯನ್ನು ರಚಿಸಿರುವುದರ ಬಗೆಗೆ ಹೆಮ್ಮೆಯನ್ನು ವ್ಯಕ್ತಪಡಿಸುವಂತವಾಗಿವೆ. ಇಂತಹ ಕವಿತೆಗಳಿಗೆ ನಿದರ್ಶನವಾಗಿ ಈ ಕವಿತೆಗಳನ್ನು ಗಮನಿಸಬಹುದು.

'ಗಿಡವೆಂದು ಬಗೆದೆಯೋ
ಹೆಣ್ಣು ಜನ್ಮದ ಒಡಲ
ಫಲಗಳನ್ನು ಸೃಜಿಸುವುದಕೆ'[5] ಎಂಬುದಾಗಲೀ,
(ಚಂಡಶಾಸನ)

'ಗಂಡನೆಂದರೆ ಪ್ರಾಣಗಂಡ ಹೆಣ್ಣೆ ನೀ ಗಂಡನ
ಕೂಡಿಕೊಂಡ್ಯ ನೋಡು ಮಂಡೂಕ ಸರ್ಪದ ನೆಳಲಿಗೆ
ಹೋದಂತೆ ಬಂಡಿಗೆ ಬಸವನು ಶಿರಬಾಗಿಕೊಂಡಂತೆ'[6] (ಗಂಡ)

ಎಂಬುದಾಗಲೀ ಸಮಾಜದಲ್ಲಿ ಹೆಣುಮಕ್ಕಳನ್ನು ಹೆರುವ ಯಂತ್ರದಂತೆ ಕಾಣುತ್ತಿದ್ದುದನ್ನು ಮತ್ತು ಪತಿಯ ಜೊತೆ ಬದುಕಲು ಹೆಣ್ಣು ಮಾನಸಿಕವಾಗಿ ಸಿದ್ಧಳಾಗಿ ವಿಧೇಯತೆಯನ್ನು ಎಂದಿಗೂ ಮರೆಯದಂತೆ ಪಾಲಿಸಬೇಕಾದ ಸ್ಥಿತಿಗೆ ಸಿಲುಕುವ ಬಗ್ಗೆ ಗಂಡನನ್ನು ಮಂಡೂಕ ಸರ್ಪಕ್ಕೆ ಹೋಲಿಸಿ ಬರೆದಿರುವುದನ್ನು ಕಾಣಬಹುದು.

ಮೊದಲನೆ ತಲೆಮಾರಿನ ಲೇಖಕಿಯರೆಂದು ಗುರುತಿಸಲ್ಪಡುವ ತಿರುಮಲಾಂಬ ಹಾಗೂ ಬೆಳಗೆರೆ ಜಾನಕಮ್ಮನವರ ನಂತರದಲ್ಲಿ ಮಹಿಳಾ ಕಾವ್ಯದ ಪ್ರಗತಿ ಕುಂಠಿತವಾಯಿತು. ಏಕೆಂದರೆ ಎರಡನೆಯ ತಲೆಮಾರಿನ ಲೇಖಕಿಯರೆಂದು ಗುರುತಿಸಲಾಗುವ ವಾಣಿ, ತ್ರಿವೇಣಿ, ಎಂ.ಕೆ. ಇಂದಿರಾ, ಹೆಚ್.ವಿ. ಸಾವಿತ್ರಮ್ಮ, ಅನುಪಮಾ ಮುಂತಾದವರು ಕಥೆ ಕಾದಂಬರಿಗಳ ರಚನೆಯಲ್ಲಿ ಹೆಚ್ಚು ತೊಡಗಿಸಿಕೊಂಡಿದ್ದು ಕಾವ್ಯದ ಕಡೆಗೆ ಗಮನ ಕೊಡದೆ ಹೋದದ್ದನ್ನು ಕಾಣಬಹುದು.

## ಸಮಕಾಲೀನ ಮಹಿಳಾ ಕಾವ್ಯ

ಎಪ್ಪತ್ತರ ದಶಕದ ಉತ್ತರಾರ್ಧದಲ್ಲಿ ಕನ್ನಡ ಸಾಹಿತ್ಯದಲ್ಲಿ ಗಮನಿಸಬಹುದಾದ ಮುಖ್ಯ ಅಂಶವೆಂದರೆ ಮಹಿಳೆಯರು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕಾವ್ಯ ರಚಿಸಲು ತೊಡಗಿದ್ದು ಎಂದೇ ಹೇಳಬಹುದು. ಕಥೆ ಕಾದಂಬರಿಗಳೇ ಹೆಚ್ಚಾಗಿ ಸೃಷ್ಟಿಯಾಗುತ್ತಿದ್ದ ಕಾಲ ಸರಿದು ಕಾವ್ಯವೇ ಪ್ರಧಾನ ಅಭಿವ್ಯಕ್ತಿ ಮಾರ್ಗವಾಗಿ ಕಾಣಿಸಿಕೊಳ್ಳಲು ಕಾರಣಗಳನ್ನು ಶೋಧಿಸುವಾಗ, ಆ ಸಂದರ್ಭದಲ್ಲಿ ನವ್ಯ ಚಳುವಳಿ ಮುಂಚೂಣಿಯಲ್ಲಿದ್ದು, ನವ್ಯಕಾವ್ಯವು ಪ್ರಜ್ಞಾಪೂರ್ವಕವಾಗಿ ಕವಿತೆಯನ್ನು ರಚಿಸಲು ಸಾಧ್ಯ ಎಂಬ ನಿಲುವನ್ನು ಪ್ರಕಟಿಸಿದ್ದು, ಛಂದಸ್ಸಿನ ನಿಯಮಗಳು ತೀವ್ರವಾಗಿ ಸಡಿಲವಾದದ್ದು ಎಂದೂ ಗುರುತಿಸಬಹುದು ಅಲ್ಲದೆ ನವ್ಯ ಸಾಹಿತ್ಯವು ಸೃಷ್ಟಿಸಿದ ಸಾಹಿತ್ಯ ಕೃತಿಗಳಲ್ಲಿ ಹೆಣ್ಣು ನಿರೂಪಿತವಾಗಿರುವ ಬಗೆಯೂ ಲೇಖಕಿಯರು ಕಾವ್ಯದ ಕಡೆಗೆ ತಮ್ಮ ಒಲವನ್ನು ತೋರಲು ಕಾರಣವಿರಬಹುದೆಂದು ಊಹಿಸಬಹುದು.

ನವೋದಯ ಸಾಹಿತ್ಯದಲ್ಲಿ ಹೆಣ್ಣು ರಕ್ಷಕಿ ಹಾಗೂ ವಿನಾಶಕಾರಿಣಿ ಎಂಬ ಎರಡು ನೆಲೆಗಳಲ್ಲಿ ಚಿತ್ರಿತವಾಗಿದ್ದಳು. ಅನಂತರದ ಸಾಹಿತ್ಯ ಕೃತಿಗಳಲ್ಲಿ ಅವಳು ಗಂಡಿಗೆ ಪೂರಕವಾದವಳು ಹಾಗೂ ಕೆಲವು ಕಡೆ ಅವಳು ವಸ್ತುವೆಂಬಂತೆ ಕೂಡ ನೋಡುವ ಕ್ರಮವನ್ನು ಪುರುಷ ಪ್ರಧಾನ ಸಾಹಿತ್ಯಧಾರೆ ಪರಿಗಣಿಸಿತು. ಎಪ್ಪತ್ತರ ದಶಕದ ಕೊನೆಗೆ ಆರಂಭವಾದ ಮಹಿಳಾ ಕಾವ್ಯಧಾರೆಯ ಲಕ್ಷಣಗಳನ್ನು ಸ್ತ್ರೀವಾದಿ ನೆಲೆಯಲ್ಲಿ ಡಾ. ಕೆ. ಕೇಶವ ಶರ್ಮ ಹೀಗೆ ಗುರುತಿಸಿದ್ದಾರೆ. 'ನವ್ಯದ ಸಂದರ್ಭದಲ್ಲಿ ಬಂದಿರುವ ಸ್ತ್ರೀವಾದಿ ನೆಲೆಗಳು ಒಂದು ಅರ್ಥದಲ್ಲಿ ಗಂಡು ಮಾದರಿಯ ಅನುಕರಣೆಯ; ಅದಕ್ಕೆ ಕೊಡುವ ಪ್ರತಿಕ್ರಿಯೆಯ ಮಾದರಿಯಲ್ಲಿವೆ'.[7] ಈ ಹೇಳಿಕೆಯು ಮಹಿಳಾ ಕಾವ್ಯವು ವ್ಯಂಗ್ಯ, ಕಟಕಿ, ಆತ್ಮವಿಮರ್ಶೆಗೆ ಹೆಚ್ಚು ಒತ್ತು ಕೊಟ್ಟಿರುವುದಕ್ಕೆ ಇರಬಹುದಾದ ಕಾರಣವನ್ನು ಸೂಚಿಸುತ್ತದೆ. ಅಂತೆಯೇ ಹಲವಾರು ಮಹಿಳೆಯರು ಕಾವ್ಯ ಮಾಧ್ಯಮದಲ್ಲಿ ಬರೆದರು.

'ಅಕ್ಷರ ಹೊಸ ಕಾವ್ಯ' ಎಂಬ ಸಂಪಾದಿತ ಕವನಗಳ ಸಂಕಲನವನ್ನು ಲಂಕೇಶ್‌ರವರು 1970ರಲ್ಲಿ ಪ್ರಕಟಿಸಿದರು. ಈ ಸಂಕಲನದಲ್ಲಿ ಮಹಿಳೆಯರ ಒಂದು ಕವಿತೆಯೂ ಪ್ರಕಟವಾಗಿರಲಿಲ್ಲ. ನಳಿನಿ ದೇಶಪಾಂಡೆ ಎಂಬ ಕಲ್ಪಿತ ಕವಿಯೊಬ್ಬಳು ಬರೆದ (ಆದರೆ ಪೂರ್ಣಚಂದ್ರ ತೇಜಸ್ವಿಯವರು ಆ ಕವಿತೆಗಳನ್ನು ಬರೆದಿರುವರೆಂದು ಈಗ ತಿಳಿದಿದೆ) ಎರಡು ಕವಿತೆಗಳಿವೆ. ಈ ರೀತಿ ಕಲ್ಪಿತ ಕವಿಯ ಹೆಸರಿನಲ್ಲಿ ಕವಿತೆಗಳನ್ನು ಪ್ರಕಟಿಸುವುದರ ಹಿಂದೆ ಎರಡು ಅಂಶಗಳನ್ನು ಗುರುತಿಸಬಹುದು. ಮಹಿಳಾ ಕವಿಗಳನ್ನು ಪ್ರೋತ್ಸಾಹಿಸುವುದು ಒಂದು ಅಂಶವಾದರೆ, ಎರಡನೆಯದು ಪುರುಷ ಸಾಹಿತ್ಯ ವಲಯ ಯಾವ ಬಗೆಯ ಕವಿತೆಗಳನ್ನು ಮಹಿಳೆಯರಿಂದ ನಿರೀಕ್ಷಿಸುತ್ತಿದೆ ಎಂಬುದು. 'ಸೀರೆಯಂಗಡಿಯಲ್ಲಿ ಮಾದರಿಗೆ ನಿಲ್ಲಿಸಿರುವ ಪ್ರತಿಮೆಗೆ' 'ಲ್ಯಾಂಬ್ರಂಟಾ ಮತ್ತು ವೆಸ್ಪಾ' ಎಂಬ ನಳಿನಿ ದೇಶಪಾಂಡೆ(ತೇಜಸ್ವಿ)ಯುವರ ಕವಿತೆಗಳ ಬಗೆಗೆ ಕೆ.ಎಸ್. ನರಸಿಂಹಸ್ವಾಮಿಯವರು ಸಂಪಾದಕರೊಂದಿಗೆ, 'ಹೆಣ್ಣಿನ ಮೃದುತ್ವ ಈ ಕವನಗಳಲ್ಲಿ ಚೆನ್ನಾಗಿ ಬಂದಿದೆ. ತುಂಬಾ ಚೆನ್ನಾಗಿವೆ'[8] ಎಂದು ಹೇಳಿದ್ದಾರೆ. ಹೀಗೆ ತೇಜಸ್ವಿಯವರು ಹೆಣ್ಣೊಬ್ಬಳು ಕವಿತೆ ಬರೆದರೆ ಹೇಗಿರಬಹುದೆಂದು ಕಲ್ಪಿಸಿಕೊಂಡು ಬರೆದಾಗ ಮೃದುತ್ವ, ಕೋಮಲತೆಗಳು ಕವಿತೆಗಳಲ್ಲಿ ಮೂಡಬೇಕು ಎಂಬುದನ್ನು ಪರೋಕ್ಷವಾಗಿ ಸೂಚಿಸಿದಂತಲ್ಲವೆ ಎಂದು ಪ್ರಶ್ನಿಸಬಹುದು. ಹೀಗೆ ಅಕ್ಷರ ಹೊಸ ಕಾವ್ಯದ ಪ್ರಥಮ ಮುದ್ರಣದಲ್ಲಿ ಒಬ್ಬ ಮಹಿಳೆಯ ಕವಿತೆಯೂ ಇರಲಿಲ್ಲ. ಇಪ್ಪತ್ತು ವರ್ಷಗಳ ನಂತರ 1993ರಲ್ಲಿ ಪರಿಷ್ಕೃತ ಆವೃತ್ತಿ ಬಂದಾಗ ಎಂಟು ಜನ ಮಹಿಳಾಕವಿಗಳ ಕವಿತೆಗಳು ಪ್ರಕಟವಾದವು.

ಮಹಿಳೆಯರು ಕವಿತೆಗಳ ರಚನೆಗೆ ಹೆಚ್ಚು ಪ್ರಾಮುಖ್ಯತೆ ನೀಡಿರುವುದನ್ನು ಗುರುತಿಸುತ್ತಾ 'ಶೈಲಜಾ ಉಡಚಣ ತಮ್ಮ ಆತ್ಮಕಥೆಯಲ್ಲಿ (ಲೇಖ–ಲೋಕ) ತಿಳಿಸಿರುವ ಹಾಗೆ ಅವರ ಮೊದಲ ಕವನ ಸಂಕಲನ 1972ರಲ್ಲಿ ಬಂದಾಗ ಮಹಿಳೆಯರಿಂದ ಕಾದಂಬರಿಗಳ ಮಹಾಪೂರವೇ ಇತ್ತು. ಕವಿತೆ ಬರೆಯುವವರು ಒಬ್ಬರೂ ಇಲ್ಲ ಎಂದು ನಿರ್ಧರಿಸಿಕೊಂಡುಬಿಟ್ಟಂತೆ ಕವನದಿಂದ ದೂರವಾಗಿದ್ದರು. ಇದಕ್ಕೆ ಪ್ರತಿಯಾಗಿ ಸಮಕಾಲೀನ ಬಹುತೇಕ ಎಲ್ಲ ಲೇಖಕಿಯರು ಕವಿತೆಯ ಮೂಲಕವೇ ಸಾಹಿತ್ಯ ಕ್ಷೇತ್ರಕ್ಕೆ ಕಾಲಿರಿಸಿದ್ದಾರೆ ಎನ್ನಬಹುದು. ಈ ವೈರುಧ್ಯ ನಿಜಕ್ಕೂ ಕುತೂಹಲಕಾರಿಯಾಗಿದೆ"[9] ಎಂದಿದ್ದಾರೆ.

ಮಹಿಳೆಯರು ಕಾವ್ಯದತ್ತ ಹೆಚ್ಚು ಆಕರ್ಷಿತರಾಗಲು ಕಾರಣವನ್ನು ಗುರುತಿಸುತ್ತಾ ಬಿ.ಎನ್.ಸುಮಿತ್ರಾಬಾಯಿಯವರು 'ನವ್ಯ ಚಳುವಳಿಯ ಪ್ರಭಾವದಿಂದ ಸಾಹಿತ್ಯದ

ಎಲ್ಲ ಮಗ್ಗುಲುಗಳಲ್ಲಿ ಸ್ವಂತಿಕೆಯ ಅರಿವು ಪ್ರಚೋದಿತವಾಯಿತು ಎನ್ನುವುದು ನಿಜ. ಆದರೆ ಎಪ್ಪತ್ತರ ದಶಕದ ನಂತರ ರಾಜಕೀಯ, ಆರ್ಥಿಕ, ಸಾಮಾಜಿಕ ಒತ್ತಡಗಳು ಸಮಾಜದ ಹತ್ತಿಕ್ಕಲ್ಪಟ್ಟ ಜನತೆ ಎಚ್ಚರಗೊಳ್ಳುವಂತಹ ವಾತಾವರಣ ನಿರ್ಮಿಸಿದವು ಎಂಬುದನ್ನು ಗಮನಿಸಿದಲ್ಲಿ ಕಾವ್ಯದತ್ತ ಮಹಿಳೆಯರಲ್ಲಿ ಹೆಚ್ಚು ಆಸಕ್ತಿ ಹುಟ್ಟಿರುವುದಕ್ಕೂ ಸಾಮಾಜಿಕವಾಗಿ ತಮ್ಮ ಅಸ್ತಿತ್ವದ ಸಮರ್ಥನೆಯ ಅವಶ್ಯಕತೆಯನ್ನು ಅವರು ಗ್ರಹಿಸಿರುವುದಕ್ಕೂ ಸಂಬಂಧವಿದೆ. ಈ ಅಸ್ತಿತ್ವ ಸಮರ್ಥನೆಯ ಯತ್ನ ಕಾವ್ಯ ಅಥವಾ ಕಥಾಸಾಹಿತ್ಯಗಳೆಲ್ಲದರಲ್ಲೂ ತುಡಿತವಾಗಿ ಕಾಣಿಸಿಕೊಂಡಿದೆ.'[10] ಎಂದಿದ್ದಾರೆ.

ಈ ಹಿನ್ನೆಲೆಯಲ್ಲಿ 1990ರಲ್ಲಿ ಪ್ರಕಟವಾದ ಮಹಿಳಾ ಕಾವ್ಯ ಸಂಕಲನ 'ಹೊಸ ಹೆಜ್ಜೆ'ಯು ಎಂಭತ್ತು ಹಾಗೂ ತೊಂಭತ್ತರ ದಶಕಗಳಲ್ಲಿ ಪ್ರಕಟವಾದ ಹಲವಾರು ಕವಿಗಳ ಕವನಸಂಕಲನಗಳ ಪ್ರಾತಿನಿಧಿಕ ಕವನಗಳನ್ನು ಪ್ರಕಟಿಸಿತು.

ಈ ಸಂಗ್ರಹದಲ್ಲಿ 1976ರಲ್ಲಿ ಪ್ರಕಟವಾದ ಎನ್.ವಿ.ಭಾಗ್ಯಲಕ್ಷ್ಮಿಯವರ 'ಬೆರಳ ಸಂದಿಯ ಬದುಕು' ಕವನ ಸಂಕಲನದ ಕವನಗಳೂ ಸೇರಿವೆ. ಈ ಕವಿತೆಗಳು ವೈಯಕ್ತಿಕ ನೆಲೆಯ ಶೋಧನೆಯಲ್ಲಿ ತೊಡಗಿರುವುದನ್ನು ಕಾಣಬಹುದು.

'ನಾನು ಕುರಿಮರಿಯಲ್ಲ
ಗೆಳೆಯ
ನರಿಯೂ ಅಲ್ಲ
ನಾನಾರು ಗೊತ್ತೇ?
- - - - - - - - -
- - - - - - - - -
- - - - - - -
ಬೇಡವೆಂದು ಮುಖ ತಿರುಗಿಸಿದರೆ
ಝಾಡಿಸಿ ಹೋಗಬಲ್ಲ ಸಿಂಹಿಣಿ ನಾನು!'[11] (ಕಾಡಿನಲ್ಲಿ)
ಎಂದು ತನ್ನನ್ನು ಗುರುತಿಸಿಕೊಳ್ಳುವ ಹೆಣ್ಣು,

'ಶತಮಾನಗಳ ಕಮಟುಗಟ್ಟಿದ ದುಪ್ಪಟಿ ಬಿಚ್ಚಿ,
ಬತ್ತಲಾದ ಬಿಸಿಲಿಗೆ ಇಂದು ಬೀಸಿದ ಗಾಳಿಗೆ ಒಡ್ಡಿದರೆ ಮೈ,
ಸಿಕ್ಕಬಹುದು ಬಿಚ್ಚಿಟ್ಟ ಬಯಲು'[12] (ಅಸ್ತಿತ್ವ)

ಎಂದು ತನ್ನನ್ನು ಆವರಿಸಿರುವ ಪರಂಪರಾಗತ ಮೌಲ್ಯಗಳನ್ನು ಬಿಟ್ಟು ಹೊಸ ಹುಟ್ಟಿಗೆ ಎದುರುನೋಡುತ್ತಿರುವ ಬಗೆ ಇಲ್ಲಿ ಕಾಣುತ್ತದೆ.

ಎಂ.ಆರ್. ಕಮಲ ಅವರ 'ನಾನು' ಕವಿತೆ ಸಹ ತನ್ನನ್ನು ಗುರುತಿಸಿಕೊಳ್ಳುವ, ಮಾನವೀಯ ನೆಲೆಯಲ್ಲಿ ತನ್ನನ್ನು ವ್ಯಾಖ್ಯಾನಿಸಿಕೊಳ್ಳಲು ಪ್ರಯತ್ನಿಸುವ ಹೆಣ್ಣಿನ ನಿರೂಪಣೆಯಾಗಿ ಬಂದಿದೆ. ಸಂಪ್ರದಾಯದ ಉನ್ನತವಾದ ಮೌಲ್ಯಗಳಲ್ಲಿ ಕಟ್ಟಿಹಾಕಿಸಿಕೊಂಡ ಸೀತೆ, ದ್ರೌಪದಿ, ಚಿತ್ರಾಂಗದೆ, ಸಾವಿತ್ರಿಯರಂತೆ ತಾನಲ್ಲವೆಂಬುದನ್ನು ಹೇಳುತ್ತಾ ಕವನದ ನಾಯಕಿ,

'ನಾನು,
ನನ್ನೆಲ್ಲ ಸಣ್ಣತನದ
ಸ್ವಾರ್ಥದ ಮಾನವೀಯ ಭಾವನೆಗಳ
ಒಂದು ಮೊತ್ತ' [13]

ಎಂದು ಹೇಳಿಕೊಳ್ಳುತ್ತಾಳೆ.

ಪ್ರತಿಭಾ ನಂದಕುಮಾರ್ ಅವರ 'ನಾವು ಹುಡುಗಿಯರೇ ಹೀಗೆ' ಎಂಬ ಕವನವೂ 'ಹೊಸ ಹೆಜ್ಜೆ' ಸಂಗ್ರಹದಲ್ಲಿತ್ತು. 'ನಾವು ಹುಡುಗಿಯರೇ ಹೀಗೆ' ಎಂಬ ಕವನ ಸಂಕಲನ 1979ರಲ್ಲಿ ಪ್ರಕಟವಾಯಿತು.

'ಏನೇನೋ ವಟಗುಟ್ಟಿದರೂ
ಹೇಳಬೇಕಾದ್ದನ್ನು ಹೇಳದೆ
ಏನೇನೆಲ್ಲಾ ಅನುಭವಿಸಿ ಸಾಯುತ್ತೇವೆ.
ಜುಮ್ಮೆನ್ನಿಸುವ ಆಲೋಚನೆಗಳನ್ನೆಲ್ಲ
ಹಾಗೇ ಡಬ್ಬಿಯೊಳಗೆ ಹಿಟ್ಟು ಒತ್ತಿದಂತೆ
ಒತ್ತಿ ಒತ್ತಿ ಗಟ್ಟಿ ಮಾಡುತ್ತೇವೆ.' [14]

ಈ ಕವಿತೆಯಲ್ಲಿ ಹುಡುಗಿಯರೆಲ್ಲರ ಅನುಭವಕ್ಕೆ ಬಂದಿರಬಹುದಾದ ಸಂಗತಿಯನ್ನು ಬಿಚ್ಚಿಡುತ್ತಾರೆ. ಮೇಲಿನ ಸಾಲುಗಳಲ್ಲಿ ಹೆಣ್ಣು ತನ್ನ ಅನಿಸಿಕೆಗಳನ್ನು ಮುಕ್ತವಾಗಿ ವ್ಯಕ್ತಪಡಿಸಲು ಎಷ್ಟೋ ಶತಮಾನಗಳಿಂದ ಸಾಧ್ಯವಾಗದೆ ಹೋಗಿದ್ದು ಅಂತಹ ಸ್ಥಿತಿಗೇ ಅವಳು ಒಗ್ಗಿ ಹೋಗಿರುವುದನ್ನು ಸಮರ್ಥವಾಗಿ ಸೂಚಿಸುತ್ತದೆ.

ಹೀಗೆ ಒಂದೇ ದಶಕದ ಅವಧಿಯಲ್ಲಿ ಹಲವಾರು ಮಹಿಳಾ ಕವಿಗಳು ಕಟ್ಟೆಯೊಡೆದಂತೆ ಕವನಗಳನ್ನು ಬರೆದು ಕವನ ಸಂಕಲನಗಳನ್ನು ಪ್ರಕಟಿಸಿದರು. ತಮ್ಮ ಬಗೆಗೆ ತಮ್ಮ ಬದುಕಿನ ಬಗೆಗೆ ತೀವ್ರವಾಗಿ ಅಭಿವ್ಯಕ್ತಗೊಳಿಸಿದರು. ಯಾವುದನ್ನು ಹೆಂಗಸರು ಬರೆಯುವುದನ್ನು ಸಮಾಜವು ಊಹಿಸಿರಲಿಲ್ಲವೋ ಅಂತಹ ಸಂಗತಿಗಳ ಬಗೆಗೂ ಕವಿತೆಗಳು ಬಂದವು. ಎನ್.ವಿ. ಭಾಗ್ಯಲಕ್ಷ್ಮಿ ಅವರ 'ಪ್ರತಿ-ಕ್ರಿಯೆ' ಕವನದಲ್ಲಿ ಹುಡುಗಿಯೊಬ್ಬಳು ಕಾಮದ ಬಗ್ಗೆ ಪದ್ಯ ಬರೆದರೆ ಏನೆಲ್ಲಾ ಪ್ರತಿಕ್ರಿಯೆಗಳು ಬರುತ್ತವೆ ಹಾಗೂ ತನ್ನ ವೈಯುಕ್ತಿಕ ಬದುಕಿನಲ್ಲಿ ಎದುರಿಸಬೇಕಾದ ಪ್ರಶ್ನೆಗಳು, ಛೀಮಾರಿಗಳನ್ನು ದಾಖಲಿಸುವ ಈ ಕವಿತೆ ಕೊನೆಗೆ

'ಹುಡುಗಿ

ಕಾಮದ ಬಗ್ಗೆ ಪದ್ಯ ಬರೆಯುತ್ತಾಳೆ.'[15] ಎಂಬ ನಿರ್ಧಾರಕ್ಕೆ ತಲುಪುತ್ತದೆ. ಈ ಸಾಲುಗಳು ಹೆಣ್ಣು ಮುಕ್ತವಾಗಿ ಅಭಿವ್ಯಕ್ತಿಸಲು ತೊಡಗಿದುದರ ಸ್ಪಷ್ಟ ಸೂಚನೆಯನ್ನು ನೀಡುತ್ತದೆ.

'ಹೊಸ ಹೆಜ್ಜೆ' ಸಂಗ್ರಹದ ಮುನ್ನುಡಿಯಲ್ಲಿ ಮುನ್ನುಡಿಕಾರರು 'ನಮ್ಮ ಕವಯಿತ್ರಿಯರು ವ್ಯವಸ್ಥೆಯ ವಿರುದ್ಧ ಪ್ರತಿಭಟನೆಯನ್ನು ತಡವಾಗಿ ಆರಂಭಿಸಿದರು. ಈ ಪ್ರತಿಭಟನೆಯೂ ಮೊದಲಲ್ಲಿ ಒಂದು ರೀತಿಯ ಹೊಂದಾಣಿಕೆಯ ಪ್ರತಿಭಟನೆಯಾಗಿತ್ತು. ತೀರ ಇತ್ತೀಚೆಗೆ ಮಾತ್ರ ಇದು ಒಂದು ಸ್ಪಷ್ಟವಾದ ಧೋರಣೆಯಾಗಿ ರೂಪುಗೊಳ್ಳುತ್ತಿದೆ'.[16]

ಈ ಮಾತುಗಳಿಗೆ ಅಪವಾದಗಳನ್ನು 'ಹೊಸ ಹೆಜ್ಜೆ' ಸಂಕಲನದ ಕವಿತೆಗಳಲ್ಲಿಯೇ ಕಾಣಬಹುದು. ಹೊಂದಾಣಿಕೆಯ, ಸೌಮ್ಯವಾದ ಪ್ರತಿಕ್ರಿಯೆಗಳ ಬದಲಿಗೆ ಪ್ರತಿಭಟನೆಯ ಕಿಡಿಗಳಂತೆ ಹಲವು ಕವಿಗಳ ಕವಿತೆಗಳು ಕಂಡು ಬರುತ್ತವೆ. ರಭಸ, ರೊಚ್ಚುಗಳು ಸಹ ಈ ಕವಿತೆಗಳ ಗುಣಗಳಾಗಿವೆ ಎನ್ನಬಹುದು. ಸ. ಉಷಾರ 'ಅಮ್ಮನಿಗೆ' ಕವಿತೆ,

'ಅಂಗಳದ ಗಿಡವ ಪ್ರದಕ್ಷಿಸಿ
ರಂಗೋಲಿ ಬರೆದು ಕೈಲಾಸ ಕಾಣಲು
ಗಾಳಿ ಬೆಳಕಿಲ್ಲದೆ ಹೆಣವಾಗಲು
ನಿನ್ನ ದಮ್ಮಯ್ಯ ನನ್ನ ಕೈಲಾಗೋದಿಲ್ಲ
ನೀ ಹಾಕಿರುವ ಅಣೆಕಟ್ಟು
ಒಡೆದು ಬಿರುಮಳೆಗೆ ಸೊಕ್ಕಿ
ಭೋರ್ಗರೆದು ನುಗ್ಗಿ
ನಿನ್ನಂತಾಗದೆ ಬದುಕುತ್ತೇನೆ
ದಾರಿ ಬಿಡು'[17]

ಎಂದು ಮುನ್ನುಗ್ಗುವ ಮಾದರಿ ಇಲ್ಲಿದೆ. ಹಳೆಯ ತಲೆಮಾರಿನ ಬದುಕಿಗೆ ಪ್ರತಿಯಾಗಿ ಹೊಸ ತಲೆಮಾರು ಹೊಸ ಬದುಕಿಗೆ ಹಾತೊರೆಯುವುದನ್ನು ಕಾಣಬಹುದು. ಒಮ್ಮೊಮ್ಮೆ ಹಳೆಯ ಮಾದರಿಗಳು ಶಕ್ತಿಶಾಲಿಯಾಗಿ ಕಂಡರೂ ಅದರ ಮಿತಿಗಳನ್ನು ಅರಿತಿರುವ ರೀತಿ ಕಂಡು ಬರುತ್ತದೆ. ತನ್ನ ಹಾದಿಯ ಸಂಕೀರ್ಣತೆಯನ್ನು ಅರಿತೂ ಹೆಣ್ಣು ದಿಟ್ಟವಾಗಿ ಮುಂದೆ ಸಾಗುವ ನಿರ್ಧಾರದವಳಾಗಿ ಕಾಣುತ್ತಾಳೆ. ಚ. ಸರ್ವಮಂಗಳ ಅವರ 'ತಡೆ' ಕವನದಲ್ಲಿ

ದಮ್ಮಯ್ಯ ಅಮ್ಮ, ಅಳಬೇಡ, ಕರೆಯಬೇಡ
ಸಾಯಬೇಡ ಹಾಗೆ ನೋಡಬೇಡ ಗೊತ್ತಮ್ಮಾ
ನನ್ನ ಹಿಂದೆ ಹುಟ್ಟಿದವಳೂ ಉಡುತ್ತಿದ್ದಾಳೆ ಸೀರೆ,
ನಲ್ಲಿಯಲ್ಲಿ ನೀರು ಬರುತ್ತಿದೆ
ತುಂಬಿಸಬೇಕೆನಮ್ಮಾ ಬಚ್ಚಲಿನ ಹಂಡೆ? [18] (ತಡೆ)

ಹೀಗೆ ಅಮ್ಮನನ್ನು ಕೇಳುವ ಕವಿತೆಯ ನಾಯಕಿ ತನ್ನ ಅಜ್ಜಿಯ ಕಿವಿಮಾತು – 'ಬದುಕ ಬಗೆಯಬಾರದು ಮಗಳೇ ಅದರ / ಒಳ ಹೋಗಬೇಕು. ಬಗೆದರೇನಲ್ಲಿ ಇಬ್ಭಾಗ ಅಷ್ಟೇ'[19] – ಎಂಬುದಕ್ಕೆ,

'ಕುಡಿದು ಗುಟುಕು ಹಾಲು
ತಣಿಸಿಕೊಳ್ಳುತ್ತ ಒಡಲುರಿಯ
ಅಂದುಕೊಳ್ಳುವೆ; ಅವಳಂತೆ
ಬದುಕು ಹೊಕ್ಕು ಬರಲಾರೆ; ಕೊಂಡಿ
ಕಳಕೊಳ್ಳದ ಅಜ್ಜಿ ನನಗಾಗಲಿಲ್ಲ ಕೊಂಡಿ'.[20]

ಎಂದು ಒಪ್ಪಿತ ಮಾದರಿಯ ಬದುಕನ್ನು ನಿರಾಕರಿಸಿ, ಹೊಸ ರೀತಿಯಲ್ಲಿ ಅದನ್ನು ಕಟ್ಟಿಕೊಳ್ಳಲು ಪ್ರಯತ್ನಿಸುತ್ತಿರುವುದನ್ನು ಕಾಣಬಹುದು.

ಎಂಭತ್ತು, ತೊಂಭತ್ತರ ದಶಕದಲ್ಲಿ ಬರೆಯಲಾದ ಸಂಪಾದಿತ ಕವನಗಳ ಸಂಗ್ರಹವಾಗಿರುವ 'ಹೊಸ ಹೆಜ್ಜೆ'ಯಲ್ಲಿ ಸುಮಾರು ಐವತ್ತು ಜನ ಮಹಿಳಾ ಕವಿಗಳ ಕವನಗಳಿವೆ. ಕನ್ನಡ ಮಹಿಳಾ ಕಾವ್ಯದಲ್ಲಿ ಹೊಸ ಪಲ್ಲಟವನ್ನು ಸೂಚಿಸುವ ಕವನ ಸಂಗ್ರಹವಾಗಿ ಈ ಕೃತಿ ಮಹತ್ವ ಪಡೆದಿದೆ. ಆದರೆ ಇದೇ ಸಂಗ್ರಹದ ಮುನ್ನುಡಿಯಲ್ಲಿ 'ನಿಜವಾಗಿ ನೋಡಿದರೆ ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ, ಅಕ್ಕಮಹಾದೇವಿ ಮತ್ತು ಸಂಚಿ ಹೊನ್ನಮ್ಮ ಇವರಿಬ್ಬರೂ ಮಹಿಳೆಯರಿಗೆ ಸಂಬಂಧಿಸಿದ ಎರಡು ಮಾದರಿಗಳನ್ನು ಪ್ರತಿನಿಧಿಸುತ್ತಾರೆ'.[21] ಎಂದು ಗುರುತಿಸಲಾಗಿದೆ. ಆದರೆ ಕಾವ್ಯ ಎಂದಾಕ್ಷಣ

ಅದು ಆಯಾ ಸಾಹಿತ್ಯ ಪರಂಪರೆಯ ಮುಂದುವರಿಕೆಯೇ ಹೊರತು ಇದ್ದಕ್ಕಿದ್ದಂತೆ ಅವಸರದಲ್ಲಿ ಯಾವುದೋ ಕೆಲವು ಮಾದರಿಗಳನ್ನು ಅನುಸರಿಸಿ ಸೃಷ್ಟಿಯಾಗುವುದಲ್ಲ.

ಈ ಹಿನ್ನೆಲೆಯಲ್ಲಿ ಪ್ರತಿಭಾ ಅವರು 'ಒಂದು ಸೆಮಿನಾರಿನಲ್ಲಿ ನಾನು ಹೇಳಿದ ಹಾಗೆ, ಕನ್ನಡದಲ್ಲಿ ಮಹಿಳೆಯರ ಕವನ ಅಂದ ತಕ್ಷಣ 12ನೇ ಶತಮಾನದ ಅಕ್ಕಮಹಾದೇವಿಯಿಂದ ಶುರು ಮಾಡಿ, 19ನೇ ಶತಮಾನದ ಸಂಚಿಹೊನ್ನಮ್ಮನನ್ನು ಹೆಸರಿಸಿ, 21ನೇ ಶತಮಾನದ ನಮ್ಮನ್ನು ಅವಳ ಪಕ್ಕ ಇಟ್ಟು ನೋಡುವುದು. ಕವನ in general ಅಂದ ಕೂಡಲೇ, 12ನೇ ಶತಮಾನದ ಅಲ್ಲಮನನ್ನು ಕಿಂಚಿತ್ತು ನೆನಪಿಸಿಕೊಳ್ಳದೇ, ದಿಢೀರನೆ ಅಡಿಗರಿಂದ ಪ್ರಾರಂಭಿಸುವುದು, ಇಂತಹ ಬೇಕಾದಷ್ಟು ಕಿರಿಕಿರಿಗಳು ನಡೆಯುತ್ತಲೇ ಇವೆ.'[22] ಎಂದು ಹೇಳಿದ್ದಾರೆ. ಈ ಮಾತುಗಳು ಇಪ್ಪತ್ತನೆ ಶತಮಾನದ ಆರಂಭದಿಂದ ಮಹಿಳಾ ಸಾಹಿತ್ಯಕ್ಕಿರುವ ಪರಂಪರೆಯನ್ನು ಪರಿಗಣಿಸದೆ ವಿಮರ್ಶಕರು ಮಾಡುವ ವಿಮರ್ಶೆಯ ಬಗೆಗೆ ಸೂಕ್ಷ್ಮ ಪ್ರತಿಕ್ರಿಯೆಯನ್ನು ಸೂಚಿಸುತ್ತವೆ. ಕಥೆ, ಕಾದಂಬರಿಗಳಲ್ಲಿಯೂ ಮಹಿಳೆಯರ ಬರಹಗಳು ಉತ್ತಮವಾದ ಚಿಂತನೆಯನ್ನು ಹೊಂದಿದ್ದು, ಅವರ ಪ್ರಭಾವ ಕೂಡ ಮಹಿಳಾ ಕವಿಗಳ ಕವಿತೆಗಳ ಮೇಲೆ ಇರಬಹುದು.

ಸ್ತ್ರೀತ್ವ, ಸ್ತ್ರೀಸಹಜತೆ, ಸ್ತ್ರೀವೈಶಿಷ್ಟ್ಯ ಎಂಬ ಮಾತುಗಳಿಂದಲೇ ಮಹಿಳಾ ಕಾವ್ಯವನ್ನು ಗುರುತಿಸುವುದನ್ನು ಹಲವು ಲೇಖಕಿಯರು ವಿರೋಧಿಸುತ್ತಾರೆ. ಪುರುಷ ಪ್ರಧಾನ ಸಾಹಿತ್ಯಧಾರೆಯು ನಿರೀಕ್ಷಿಸುವ ರೀತಿಯಲ್ಲಿ ಬರೆಯದೆ ಭಿನ್ನವಾಗಿ ಬರೆದಾಗ ಅಂತಹ ಕಾವ್ಯ ಅಥವಾ ಸಾಹಿತ್ಯದ ಬಗೆಗೆ ಅಲಕ್ಷ್ಯ ತೋರಿರುವುದನ್ನು ಗಮನಿಸಬಹುದು. ಈ ಹಿನ್ನೆಲೆಯಲ್ಲಿ ಪ್ರತಿಭಾ ಅವರೇ 'ಇನ್ನು ನಮ್ಮ ವಿಮರ್ಶಕ ಪ್ರಭೃತಿಗಳು ಸ್ವಲ್ಪ ಕೂಡಾ ಮಹಿಳೆಯರ ಕವನ ಅರ್ಥ ಮಾಡಿಕೊಳ್ಳುವ ಶಕ್ತಿಯಿಲ್ಲದೆ ಮತ್ತದೇ ಹಳೆಯ 'ಸ್ತ್ರೀವಾದಿ', 'ಸ್ತ್ರೀಪರ,' 'ಸ್ತ್ರೀತ್ವ', 'ಗಾರ್ಗಿ', 'ಕಾತ್ಯಾಯಿನಿ' ಇನ್ನೂ ಏನೇನೋ ವಿಂಗಡಣೆಗಳನ್ನು ಕೊಡುವುದರಲ್ಲಿ, ಏನೇನೋ ಕಾರಣಗಳಲ್ಲಿ ತೊಡಗಿ ತಿಣುಕಾಡುತ್ತಿದ್ದಾರೆ'.[23] ಎಂದಿದ್ದಾರೆ.

ಈ ರೀತಿಯ ಅಲಕ್ಷ್ಯ ಆಧುನಿಕ ಸಾಹಿತ್ಯದಲ್ಲಿ ತಿರುಮಲಾಂಬ ಅವರ ಸಾಹಿತ್ಯಿಕ ಸಾಧನೆಗೆ ಆದಾಗಿನಿಂದಲೂ ಆಗುತ್ತಾ ಬಂದಿರುವುದನ್ನು ಗಮನಿಸಿದರೆ, ಇಂದು ಮಹಿಳೆಯರ ಕವನಗಳು ಪುರುಷ ಪ್ರಧಾನ ಸಾಹಿತ್ಯ ವಲಯದಲ್ಲಿ ಚರ್ಚೆಗೆ ಒಳಗಾಗದಿರುವುದರ ಬಗೆಗೆ ಕೂಡ ಕಾರ್ಯನಿರತವಾಗಿದೆ ಎನ್ನಬಹುದು.

ಇಂದು ಸ್ತ್ರೀವಾದಿ ಚಿಂತನೆಯು ನಿರಚನವಾದವು ಪ್ರತಿಪಾದಿಸುವ ವಿಚಾರಗಳತ್ತ ಒಲವನ್ನು ತೋರಿದೆ ಎನ್ನಬಹುದು. ಭಾಷೆಗೆ ಸಂಬಂಧಿಸಿದಂತೆ ಮನುಷ್ಯನ ಭಾಷಿಕ ಜಗತ್ತಿನಲ್ಲಿ, ಸಮಾಜದಲ್ಲಿ ಹೆಣ್ಣು ಮಾತನಾಡುವ ಭಾಷೆ ಯಾವ ಸ್ವರೂಪದ್ದು ಎನ್ನುವ ಪ್ರಶ್ನೆ ಮುಖ್ಯವಾದುದಾಗಿದೆ. ಮೇಲು–ಕೀಳು, ಪ್ರಕೃತಿ–ಸಂಸ್ಕೃತಿ, ಬೆಳಕು–ಕತ್ತಲೆ ಇಂತಹ ದ್ವಂದ್ವ ಪರಿಕಲ್ಪನೆಗಳ ನೆಲೆಯಲ್ಲಿ ಗಂಡು ಹೆಣ್ಣಿನ ಸಂಬಂಧವನ್ನು ನೋಡುವ ಪುರುಷ ಪ್ರಧಾನ ಸಂಸ್ಕೃತಿಯಲ್ಲಿ ಹೆಣ್ಣಿನ ಭಾಷೆ ಅಧಿಕಾರಕ್ಕೆ ವಿಧೇಯವಾಗಿರುವಂತೆ ನೋಡಿಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಹೆಣ್ಣು ಹೊಸ ರೀತಿಯಲ್ಲಿ ತನ್ನನ್ನು ಅಭಿವ್ಯಕ್ತಿಸಬೇಕಾಗಿದೆ. ಪ್ರತಿಭಾ ಅವರು ಮೊಲೆ, ಸಂಭೋಗ, ಇಂತಹ ಪದಗಳನ್ನು ಲೀಲಾಜಾಲವಾಗಿ ಬಳಸುವುದರ ಬಗ್ಗೆ ಹೇಳುತ್ತಾ, 'ಅಂದರೆ ಹಳೆಯ ಪುರಾತನ ರೋಲ್ ಮಾಡೆಲ್‌ನಿಂದ ಹೊರಬಂದು ಅಭಿವ್ಯಕ್ತಿಗೆ ಹೊಸ ಆಯಾಮ ನೀಡುವುದು'.[24] ಎಂದು ಹೇಳುತ್ತಾರೆ. ಈ ದಿಶೆಯಲ್ಲಿ ಹಲವು ಕವಿಗಳು ಪ್ರಯೋಗಶೀಲರಾಗಿರುವುದನ್ನು ಕಾಣಬಹುದು.

ಚ. ಸರ್ವಮಂಗಳ, ಪ್ರತಿಭಾ ನಂದಕುಮಾರ್, ಸ. ಉಷಾ, ಎಂ.ಆರ್. ಕಮಲ, ವೈದೇಹಿ, ಹೆಚ್.ಎಲ್. ಪುಷ್ಪ, ಮಮತಾ ಜಿ ಸಾಗರ ಮುಂತಾದವರು ತಮ್ಮದೇ ಆದ ಕ್ರಮದಲ್ಲಿ ಕವಿತೆಗಳಲ್ಲಿ ತಮ್ಮನ್ನು ಅಭಿವ್ಯಕ್ತಿಸಿರುವುದನ್ನು ಕಾಣಬಹುದು. 'ಆರ್ಥಿಕ ಸ್ವಾತಂತ್ರ್ಯ, ವೃತ್ತಿಪರತೆಗಳು ಕುಟುಂಬ, ಮಾತೃತ್ವದ ಅನಿವಾರ್ಯತೆಯನ್ನು ಬದಿಗೊತ್ತುತ್ತಾ ಹೋಗುತ್ತದೆ. ತನ್ನ ಬದುಕಿನ ಮೇಲೆ ತನಗೆ ಸ್ವಾತಂತ್ರ್ಯ ಸಿಕ್ಕಂತೆಲ್ಲಾ ಕನ್ಯತ್ವ, ಪತ್ನಿತ್ವ ಮಾತೃತ್ವಗಳಿಂದ ವೈಯಕ್ತಿಕತೆ, ಅಕೌಟುಂಬಿಕತೆಯೆಡೆಗೆ ಮಹಿಳೆಯೂ ಅವಳ ಸಾಹಿತ್ಯವೂ ಸಾಗಲು ಪ್ರಾರಂಭಿಸಿದೆ. ಈ ಕ್ರಮಿಸುವಿಕೆಯ ದಾರಿ ಪ್ರಯಾಸಕರವಾದ, ನಿಡಿದಾದ ಪ್ರತಿಭಟನೆಯ ದಾರಿ, ಹೊಸ ಹೊಸ ತಲೆಮಾರುಗಳು ಸೇರಿ ಪ್ರಯಾಣದ ಈ ಹಾದಿ ಒಗ್ಗಿದಂತೆಲ್ಲ ಬಂಡಾಯ ಒಂದು ಮೌಲ್ಯವಾಗಿ ಒಳಗಿಳಿದು ಬದುಕಿನೊಳಗಿಂದ ಸಾಹಿತ್ಯವಾಗಿ ರೂಪುಗೊಂಡೀತು. ಆ ಪ್ರಖರತೆಯ ದಿನಗಳು ನಾವು ಎದುರು ನೋಡಬಹುದಾದವು'.[25] ಎಂದು ವಿಜಯಾ ದಬ್ಬೆಯವರು ಹೇಳಿರುವುದು ಅರ್ಥಪೂರ್ಣವಾಗಿದೆಯೆನ್ನಬಹುದು. ಮಹಿಳೆಯರು ತಮ್ಮ ಕವಿತೆಗಳಲ್ಲಿ ಈ ಕುರಿತು ಸೂಚನೆಯನ್ನು ನೀಡಿದ್ದಾರೆ ಎನ್ನಬಹುದು.

**ಅಡಿಟಿಪ್ಪಣಿ :–**

1. ಡಾ. ಕೆ.ಆರ್. ಸಂಧ್ಯಾರೆಡ್ಡಿ, ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2006, ಪುಟ 380.
2. ವಿಜಯಾದಬ್ಬೆ, ಮಹಿಳೆ ಸಾಹಿತ್ಯ ಸಮಾಜ, ರಚನಾ ಪ್ರಕಾಶನ, ಮೈಸೂರು, 1989, ಪುಟ 2, 3.
3. ವೈ.ಸಿ. ಭಾನುಮತಿ, ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪೂರ್ವೋಕ್ತ, ಪುಟ 244
4. ಡಾ. ಎಲ್.ಜಿ. ಮೀರಾ, ಅದೇ. ಪುಟ 271.
5. ಸಂ. ನೇಮಿಚಂದ್ರ, ಬೆಳಗೆರೆ ಜಾನಕಮ್ಮ, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು, 1980, ಪುಟ 78.
6. ಅದೇ. ಪುಟ 77.
7. ಡಾ. ಕೇಶವಶರ್ಮ ಕೆ. ಕ್ರಿಯೆ ಪ್ರತಿಕ್ರಿಯೆ, ಚಿಂತನ ಕೂಟ, ವಿಜಯನಗರ, ಬೆಂಗಳೂರು, 1998, ಪುಟ 132.
8. ಸಂ. ಪಿ. ಲಂಕೇಶ್, ಅಕ್ಷರ ಹೊಸ ಕಾವ್ಯ, ಪತ್ರಿಕಾ ಪ್ರಕಾಶನ, ಬೆಂಗಳೂರು, ಎರಡನೆಯ ಪರಿಷ್ಕೃತ ಮುದ್ರಣ, 1993, ಪುಟ 377.
9. ಡಾ.ಕೆ.ಆರ್. ಸಂಧ್ಯಾರೆಡ್ಡಿ, ಪೂರ್ವೋಕ್ತ, ಪುಟ 384
10. ಬಿ.ಎನ್. ಸುಮಿತ್ರಾಬಾಯಿ, ವಿಚಯ, ಇಳಾಪ್ರಕಾಶನ, ಬೆಂಗಳೂರು, 1995 ಪುಟ 68.
11. ಸಂ. ನರಹಳ್ಳಿ ಬಾಲಸುಬ್ರಹ್ಮಣ್ಯ, ವೀಣಾ ಶಾಂತೇಶ್ವರ, ಹೊಸಹೆಜ್ಜೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1990, ಪುಟ 45.
12. ಅದೇ. ಪುಟ 47.
13. ಅದೇ. ಪುಟ 19.
14. ಅದೇ. ಪುಟ 34.
15. ಅದೇ. ಪುಟ 49.
16. ಅದೇ. ಪುಟ 7 (ಮುನ್ನುಡಿ).
17. ಅದೇ. ಪುಟ 6.

18. ಅದೇ ಪುಟ 121.

19. ಅದೇ. ಪುಟ 123.

20. ಅದೇ. ಪುಟ 124

21. ಅದೇ. ಪುಟ 7 (ಮುನ್ನುಡಿ).

22. ಪ್ರತಿಭಾ ನಂದಕುಮಾರ್, ಆಹಾ, ಪುರುಷಾಕಾರಂ! (ಮುನ್ನುಡಿ), ನೆಲಮನೆ ಪ್ರಕಾಶನ, ಶ್ರೀರಂಗಪಟ್ಟಣ, 2000, ಪುಟ 6.

23. ಅದೇ.

24. ಅದೇ.

25. ವಿಜಯಾ ದಬ್ಬೆ, ಪೂರ್ವೋಕ್ತ, ಪುಟ 17.

ಅಧ್ಯಾಯ-3

# ಪ್ರತಿಭಾ ಅವರ ಕಾವ್ಯದ ಸ್ವರೂಪ

## ಕಾವ್ಯದ ಆಶಯ

ಪ್ರತಿಭಾ ಅವರ ಕಾವ್ಯಜಗತ್ತಿನಲ್ಲಿನ ಕವಿತೆಗಳನ್ನು ಓದಿದಾಗ ಹೆಣ್ಣಿನ ಅಂತರಂಗದ ನೂರಾರು ಚಿತ್ರಗಳು ವಿಭಿನ್ನ ಸಂದರ್ಭಗಳಲ್ಲಿ ಅವಳ ಅನುಭವಗಳನ್ನು ದಾಖಲಿಸಿರುವುದು ಕಂಡು ಬರುತ್ತದೆ. ತೀವ್ರವಾಗಿ ಚಿಂತನೆಗೊಳಪಟ್ಟು ಅಭಿವ್ಯಕ್ತಿ ಪಡೆದಿರುವ ಇಲ್ಲಿನ ಕವಿತೆಗಳು ವೈಯಕ್ತಿಕ ನೆಲೆಗೆ ಹೆಚ್ಚು ಒತ್ತು ನೀಡುವುದುನ್ನು ಕಾಣಬಹುದು. 'ಪ್ರತಿಭಾ ಬಹುತೇಕ ಕವಿತೆಗಳಲ್ಲಿ ವ್ಯಕ್ತ ಮಾಡುವ ಹಾಗೆ ಹೆಣ್ಣು ಮತ್ತು ಆಕೆಯ ಆಯ್ಕೆಯ ಸ್ವಾತಂತ್ರ್ಯ ಮುಖ್ಯ, ಇದು ಅವರ ಕವಿತೆಗಳಲ್ಲಿ ಅಂತರಾಳದ ವಿಶಿಷ್ಟ ತರ್ಕವಾಗಿ ಕೆಲಸ ಮಾಡಿದೆ.'[1] ಆದ್ದರಿಂದ ಹೆಣ್ಣು ತನ್ನ ಜೀವನವನ್ನು ಅರ್ಥಪೂರ್ಣಮಾಡಿಕೊಳ್ಳಲು ತಾನು ತನ್ನ ಅನುಭವದಿಂದ ಕಂಡುಕೊಳ್ಳುವ ಕ್ರಮವನ್ನು ಅನುಸರಿಸಬೇಕು ಎಂಬ ನಿಲುವು ವ್ಯಕ್ತವಾಗುತ್ತದೆ.

ಹೆಣ್ಣಿನ ಹಲವು ಹತ್ತು ಅನುಭವಗಳು ಅವಳ ಅಸ್ತಿತ್ವದ ಹಲವು ಆಯಾಮಗಳನ್ನು ಪ್ರತಿಭಾರ ಕವನಗಳು ದಾಖಲಿಸುತ್ತವೆ. ಈ ಮೂಲಕ ಹೆಣ್ಣು ತನಗಾಗಿ ಅವಕಾಶ ರಚನೆಯನ್ನು ಮಾಡಿಕೊಳ್ಳಲು ನಿರಂತರ ಪ್ರಯತ್ನದಲ್ಲಿ ತೊಡಗಿರುವುದನ್ನು ಕಾಣಬಹುದು. 'ಹೆಣ್ಣಿಗೆ ಸ್ಥಳ ನಿರ್ಮಾಣ- Space Construction - ಅವಕಾಶ ರಚನೆ ಇವರ ಮೂಲ ಗುರಿ ಎನಿಸುತ್ತದೆ. ಇದು ಇವರ ಕಾವ್ಯದ ಅವಾಸ್ತವ ಹಂಬಲವಲ್ಲ. ಈ ಅವಕಾಶ ರಚನೆಯನ್ನು ಇವತ್ತಿನ ಹೆಣ್ಣು ಜೀವನ್ಮರಣದ ತೀವ್ರತೆಯಲ್ಲಿ ಕಟ್ಟಿಕೊಳ್ಳಲು ನಿರಂತರವಾಗಿ ಪ್ರಯತ್ನಿಸುತ್ತಿರುವುದನ್ನು ಘನತೆಯಲ್ಲಿ ಆತ್ಮವಿಶ್ವಾಸದಲ್ಲಿ ಇವರ ಕಾವ್ಯ ದಾಖಲಿಸುತ್ತದೆ.'[2]

ಪ್ರತಿಭಾ ಅವರ ಕಾವ್ಯದ ಮತ್ತೊಂದು ಆಯಾಮವು ಲಿಂಗ ತಾರತಮ್ಯಕ್ಕೆ ಸಂಬಂಧಿಸಿದ್ದು. 'ಈ ದೃಷ್ಟಿಯಿಂದ ಪ್ರತಿಭಾರ ಬಹುತೇಕ ಕವಿತೆಗಳು ಲೈಂಗಿಕ ಯಜಮಾನಿಕೆಯನ್ನು ವಿರೋಧಿಸುತ್ತವೆ ಮತ್ತು ಪುರಷ ಕೇಂದ್ರಿತ ಅಹಂಕಾರವನ್ನು ಮತ್ತು ಅದರ ಮುಖಾಂತರ ಪುರುಷ ಕೇಂದ್ರಿತ ದೇಹರೂಪಗಳನ್ನು ಹೆಣ್ಣಿನ ಮುಖಾಂತರ ಮುಖಾಮುಖಿಯಾಗಿಸುತ್ತವೆ'.[3] ಹೀಗೆ ಹೆಣ್ಣೊಬ್ಬಳು ಲೈಂಗಿಕತೆಯ ಬಗೆಗೆ ಕವಿತೆ ಬರೆಯುವುದರಿಂದಾಗಿ ಅಲಕ್ಷ್ಯಕ್ಕೆ ಒಳಗಾದರೆಂಬುದನ್ನು ಹಲವರು

ಗುರುತಿಸಿದ್ದಾರಾದರೂ ಕನ್ನಡದ ಮಟ್ಟಿಗೆ ಬರೆಯದೇ ಉಳಿದಿದ್ದ ವಿಷಯವನ್ನು ಬರೆದು ಈ ಖಾಲಿ ಜಾಗವೊಂದನ್ನು ತುಂಬಿದ್ದಾರೆನ್ನುವುದನ್ನು ಮರೆಯುವಂತಿಲ್ಲ.

'ಪ್ರತಿಭಾರ ಕವಿತೆಗಳಲ್ಲಿ ಎದ್ದು ಕಾಣುವ ಮತ್ತೊಂದು ಗುಣವೆಂದರೆ ಸಂಪ್ರದಾಯ ಮತ್ತು ಮಹಿಳೆಯ ನಡುವಣ ಸಂಬಂಧ. ಪ್ರತಿಭಾರ ಬಹುತೇಕ ಕವಿತೆಗಳಲ್ಲಿ ಬರುವ ಮಹಿಳೆಯರು ಈ ಬಿಕ್ಕಟ್ಟನ್ನು, ಈ ರೀತಿಯ ಸಾಂಪ್ರದಾಯಿಕ ತಿಳುವಳಿಕೆಯನ್ನು ಭಂಜಿಸುತ್ತಾರೆ.'[4] ಈ ಹೇಳಿಕೆಯು ಪ್ರತಿಭಾರ ಕವಿತೆಗಳು ಸಂಪ್ರದಾಯದ ಕಟ್ಟುಗಳನ್ನು ತೊಡೆದು ಮುಂದೆ ಸಾಗಿರುವುದರ ಸೂಚನೆಯನ್ನು ನೀಡುತ್ತದೆನ್ನಬಹುದು. ಆಧುನಿಕ ಜಗತ್ತಿನಲ್ಲಿ ಹೆಣ್ಣು ಹಂತ ಹಂತವಾಗಿ ಸಂಪ್ರದಾಯಗಳನ್ನು ಮೀರುತ್ತಾ ಬಂದಿರುವುದನ್ನು ನಗರ ಕೇಂದ್ರಿತ ಜೀವನ ಕ್ರಮದಲ್ಲಿ ಗಮನಿಸುತ್ತಾ ಬಂದಿರುವುದರಿಂದ ಈ ನಿಲುವಿಗೆ ಕವಿ ಬಂದಿರುವ ಸಾಧ್ಯತೆಯಿದೆ.

ಮೊದಲ ಕವನ ಸಂಕಲನದ 'ನಾವು ಹುಡುಗಿಯರೇ ಹೀಗೆ _ _ _ _' ಕವಿತೆಯಿಂದ 'ಆಹಾ, ಪುರಷಾಕಾರಂ' ಕವಿತೆಯವರೆಗೆ ಅವಿವಾಹಿತ ಯುವತಿಯ ಅನುಭವಲೋಕವು ಮುಂದೆ ದಾಂಪತ್ಯ ಜೀವನದ ಒಳಪದರಗಳನ್ನು ವಿಶ್ಲೇಷಿಸುತ್ತಾ ಸಾಗಿ ಪ್ರಬುದ್ಧ ಮನಸ್ಥಿತಿಗೆ ಬಂದು ನಿಂತಿರುವ ಅಂಶಗಳು ಕಾಣುತ್ತವೆ. ಎಚ್.ಎಸ್.ಆರ್.ರವರು ಗುರುತಿಸುವಂತೆ, 'ನಾವು ಹುಡುಗಿಯರೇ ಹೀಗೆ ಸಂಕಲನದಿಂದ ಹಿಡಿದು ಅವರು ಪುರಾವೆಗಳನ್ನು ಕೇಳುತ್ತಾರೆವರೆಗೆ ಪ್ರತಿಭಾ ಎಡೆಬಿಡದೆ ಬರೆದಿರುವ ನೂರಾರು ಕವಿತೆಗಳಲ್ಲಿ ಒಂದು ಖಚಿತವಾದ ಬೆಳವಣಿಗೆ ಇದೆ. ಅದು ತನ್ನನ್ನು ತಾನು ಕಂಡುಕೊಳ್ಳುವ ಹಾಗೂ ಕಟ್ಟಿಕೊಳ್ಳುವ ಪ್ರಜ್ಞೆಯೊಂದರ ಬೆಳವಣಿಗೆ'[5]

ಪ್ರತಿಭಾ ಅವರ ಕಾವ್ಯದ ಸ್ವರೂಪವನ್ನು ಸ್ಪಷ್ಟಪಡಿಸಿಕೊಳ್ಳಲು ಅವರ ಕವಿತೆಗಳನ್ನು ಕೆಲವು ನಿರ್ದಿಷ್ಟ ವರ್ಗಗಳಾಗಿ ಮಾಡಿಕೊಳ್ಳಲು ಸಾಧ್ಯವಿದೆಯೆನ್ನಬಹುದು. ಅವುಗಳು ಈ ಕೆಳಗಿನಂತಿವೆ.

1. ತೀರಾ ವೈಯಕ್ತಿಕ ನೆಲೆಯಲ್ಲಿ ತನ್ನನ್ನು ಗುರುತಿಸಿಕೊಂಡಿರುವ ಬಗೆ
2. ದಾಂಪತ್ಯ ಜೀವನದಲ್ಲಿನ ಹೊಸ ಬಗೆಯಲ್ಲಿ ಅಭಿವ್ಯಕ್ತಗೊಂಡಿರುವ ಆದರೆ ಪರಿಚಿತ ಅನುಭವಗಳು.
3. ಆಧುನಿಕಗೊಂಡ ನಗರದ ಮಧ್ಯಮವರ್ಗದ ಗೃಹಿಣಿಯ ಜೀವನದ ಸಹಜ ಚಿತ್ರಗಳು

4. ಲೈಂಗಿಕ ನೆಲೆಯನ್ನೇ ಪ್ರಧಾನವಾಗಿರಿಸಿಕೊಂಡಿರುವ ಕವಿತೆಗಳು

5. ಇತರ ಸಂಬಂಧಗಳಲ್ಲಿ ತನ್ನನ್ನು ಗುರುತಿಸಿಕೊಳ್ಳುವ ಬಗೆ

6. ಸಂಪ್ರದಾಯದ ಚೌಕಟ್ಟನ್ನು ಮುರಿಯುವ ಮನೋಭಾವದ ಚಿತ್ರಣ

7. ಸಂಸ್ಕೃತಿಯೊಳಗಿನ ಅಂತರ್ವಿರೋಧಗಳನ್ನು ಮುಖಾಮುಖಿಯಾಗುವ ಸಂದರ್ಭಗಳು.

**1) ತೀರಾ ವೈಯಕ್ತಿಕ ನೆಲೆಯಲ್ಲಿ ತನ್ನನ್ನು ಗುರುತಿಸಿಕೊಂಡಿರುವ ಬಗೆ.**

ನಾವು ಹುಡುಗಿಯರೆ ಹೀಗೆ... ಕವಿತೆಯು ಪ್ರಕಟವಾದುದು 1979ರಲ್ಲಿ. 'ಪ್ರತಿಭಾ ಹೋರಾಟದ ಹಾದಿ ಅನುಭವಕ್ಕೆ ಸಂಬಂಧಿಸಿದ್ದು. ಈ ಅನುಭವವು ಎಲ್ಲರಿಗೆ ಅದರಲ್ಲಿಯೂ ಪುರುಷರಿಗೆ ಆಗುವಂಥದ್ದಲ್ಲ, ಹೇಳಬೇಕಾದುದನ್ನು ಹೇಳಲಾಗದ ಸಮಸ್ತ ಮಹಿಳೆಯರ ಕುರಿತು ಪ್ರತಿಭಾ ಬರೆದರು'.[6]

'ಹೌದು ಕಣೆ ಉಷಾ
ನಾವು ಹುಡುಗಿಯರೇ ಹೀಗೆ...

ಏನೇನೋ ವಟಗುಟ್ಟಿದರೂ
ಹೇಳಬೇಕಾದ್ದನ್ನು ಹೇಳದೆ
ಏನೇನೆಲ್ಲಾ ಅನುಭವಿಸಿ ಸಾಯುತ್ತೇವೆ.
ಜುಮ್ಮೆನ್ನಿಸುವ ಆಲೋಚನೆಗಳನ್ನೆಲ್ಲಾ
ಒತ್ತಿ ಒತ್ತಿ ಗಟ್ಟಿ ಮಾಡುತ್ತೇವೆ.'[7] (ನಾವು ಹುಡುಗಿಯರೇ ಹೀಗೆ)

ಹೆಣ್ಣು ತನ್ನ ಹಿಂಜರಿಕೆಯಿಂದಲೇ ಮುಕ್ತವಾಗಿ ತನ್ನ ಅನಿಸಿಕೆಯನ್ನು ವ್ಯಕ್ತಪಡಿಸದೇ ಮುಚ್ಚಿಡುವ ಸ್ವಭಾವಕ್ಕೆ ಒಗ್ಗಿಹೋಗಿರುವುದರಿಂದ ತನಗೆ ಮೆಚ್ಚುಗೆಯಾದ ಹುಡುಗನೊಂದಿಗೆ ತನ್ನ ಪ್ರೀತಿಯನ್ನು ಹೇಳದೆ, ಅವನ ಮದುವೆಯಾದ ನಂತರ ಒಮ್ಮೆ ಸಿಕ್ಕಾಗ 'ಅವನ' ಹೆಂಡತಿ ಮಕ್ಕಳ ಯೋಗಕ್ಷೇಮವನ್ನು ವಿಚಾರಿಸುತ್ತಾಳೆ. ಈ ಅನುಭವ ಈ ಕವನದ ನಾಯಕಿಯದು ಮಾತ್ರವಲ್ಲ 'ಅವನ' ಹೆಂಡತಿ ಹಾಗೂ ಇಂತಹ ಅನೇಕ ಹೆಂಗಸರದು ಎಂಬುದನ್ನು ಕವಿತೆ ಸೂಚಿಸುತ್ತದೆ.

'ನಾನು' ಕವಿತೆಯಲ್ಲಿ ಮದುವೆಯಾಗಿ, ಮೂರು ಮಕ್ಕಳಿರುವ ತಾಯಿಗೆ ತನ್ನ ಉಡುಪು, ಅಲಂಕಾರದ ಬಗೆಗೆ ಅತ್ತೆ ಮಾವಂದಿರು ಯೋಚಿಸಿ ನಿರ್ಧರಿಸುವ, ತನ್ನ ಮಕ್ಕಳ ಚಪ್ಪಲಿ, ತಿಂಡಿ, ವಸ್ತುಗಳೂ ಕೂಡ ಇವಳ ಆಯ್ಕೆಗೆ ಸಂಬಂಧಿಸಿಯೇ ಇಲ್ಲದ ಸ್ಥಿತಿಯನ್ನು ವಿವರಿಸಿದ್ದಾರೆ.

'ನಾನೊಬ್ಬನ ಪತ್ನಿ
ಮೂರು ಮಕ್ಕಳ ತಾಯಿ
ಇನ್ನೂ ನನ್ನ ಸೀರೆ ಕುಪ್ಪಸ
ಬೊಟ್ಟು ಬೈತಲೆ ಎಲ್ಲ ನನ್ನ ಅತ್ತೆ ಮಾವಂದಿರ ಮರ್ಜಿ
ನನ್ನದೇ ಮಕ್ಕಳ ಚಪ್ಪಲಿ ಚಾಕಲೇಟು ಸ್ಲೇಟುಗಳೂ
ನನ್ನ ಪರಿಧಿ ಮೀರಿದ ವಿಷಯಗಳು'.[8] (ನಾನು)

'ನಾನು', 'ನಾವು', 'ಹೆಣ್ಣು' ಹೀಗೆ ಬಿಡಿನೆಲೆಯಲ್ಲಿಯೇ ತನ್ನ ಸುತ್ತಣ ಸಂಬಂಧಗಳ ಅನ್ವೇಷಣೆಯಲ್ಲಿ ತೊಡಗುವ ಕವಿ 'ನಾವು' ಕವಿತೆಯಲ್ಲಿ ಗಂಡಸರ ನಡವಳಿಕೆಗಳನ್ನು, ಅವರು ಹೆಂಗಸರೊಂದಿಗೆ ನಡೆಸುವ ನಯವಂಚನೆಗಳ ಸಂದರ್ಭಗಳನ್ನು ಸೂಕ್ಷ್ಮ ದೃಷ್ಟಿಯಿಂದ ಕಂಡಿದ್ದಾರೆ. ಅನೇಕ ದೌರ್ಬಲ್ಯಗಳಿರುವ ಗಂಡಸರನ್ನು ಕಂಡು, ನಮ್ಮಲ್ಲಿ ಇವರಿಗಿರುವ ಬೆಲೆ ತಮಗಿಲ್ಲವಲ್ಲ ಎಂದು ದುಃಖಿಸುವ ಹೆಂಗಸರು 'ಅಯ್ಯೋ ನಾನು ಗಂಡಾಗಲಿಲ್ಲವಲ್ಲಾ' ಎಂದು ಮಿಡುಕುವ ನಾವು ಹೆಂಗಸರು ಎಂದು ವ್ಯಂಗ್ಯದ ಧಾಟಿಯಲ್ಲಿ ಹೇಳಿಕೊಳ್ಳುತ್ತಾರೆ.

'ನಾವು ಗಂಡಸರಲ್ಲ.
ಎಲ್ಲಿ ಹೋದರೂ ಹುಡುಗಿಯರನ್ನು ಕಂಡಾಗ
ಕಣ್ಣು ಮಿಟುಕಿಸಿ ವಕ್ರನಗೆ ಬೀರುವವರಲ್ಲ.
ದುಂಡಗಿನ ಹೆಂಗಸರೊಡನೆ ಮಾತನಾಡುವಾಗ
ಮಿತಿಮೀರಿ ಮರ್ಯಾದೆ ತೋರಿದರೂ
ಮನಸ್ಸಿನಲ್ಲೇ ಅವರನ್ನು ಬೆತ್ತಲಾಗಿಸುವವರಲ್ಲ
ಒಳಗೊಳಗೆ ಗಡಗಡನೆ ನಡುಗುತ್ತಿದ್ದರೂ
ಮೇಲೆ ಪೌರುಷತ್ವದ ಶಾಲು ಹೊದೆದು ಬೀಗುವವರಲ್ಲ'.[9] (ನಾವು)

ಹೀಗೆ ಈ ಸಾಲುಗಳಲ್ಲಿ ಗಂಡಿನ ನಡವಳಿಕೆಯನ್ನು ವಿಡಂಬಿಸುತ್ತಾ ಈ ಗುಣಗಳು ನಮ್ಮಲ್ಲಿಲ್ಲದ್ದರಿಂದ ನಾವು ಹೆಂಗಸರು. ಇಂತಹ ಕೆಟ್ಟತನಗಳಿಲ್ಲದವರು ಎಂದು ಹೆಣ್ತನದ ಪ್ರತ್ಯೇಕತೆಯನ್ನು ಗುರುತಿಸುತ್ತಾರೆ.

‘ಹೆಣ್ಣು ಮತ್ತು ರಕ್ತ’ ಕವಿತೆಯಲ್ಲಿ ‘ಹೆಣ್ಣು’ ಮತ್ತು ‘ರಕ್ತ’ ಪದಗಳಿಗೆ ಇರುವ ನಿಕಟ ಸಂಬಂಧವನ್ನು ಸೂಚಿಸುತ್ತವೆ. ಬಾಲಕಿಯಾಗಿರುವಾಗ ಈಳಿಗೆ ಮಣೆಯಲ್ಲಿ ಬೆರಳು ಕತ್ತರಿಸಿಕೊಳ್ಳುವುದರಿಂದ ಹಿಡಿದು ಅವಳ ಮುಟ್ಟಿನ ಸಂದರ್ಭಗಳು ಹಾಗೂ ಅನಂತರ ಮದುವೆ, ಮಕ್ಕಳ ಹೆರಿಗೆಗಳವರೆಗೆ ಅಷ್ಟೇಕೆ ಮುಟ್ಟು ನಿಲ್ಲುವವರೆಗೆ ಈ ಸಂಬಂಧ ನಿರಂತರವಾದುದು. ಅವಳ ಜೀವನದ ಪ್ರಕ್ರಿಯೆಗಳಲ್ಲಿ ಮುಖ್ಯವಾದವುಗಳಲ್ಲಿ ಒಂದಾದ ಗರ್ಭ ಧರಿಸುವಿಕೆಯ ಬಗೆಗೆ

‘ಆಮೇಲೆ
ಸ್ರಾವ ನಿಲ್ಲುವುದೂ ದೊಡ್ಡ ವಿಷಯ
ನಿಂತಿದೆ ಅದರ ಮೇಲೆ ಮನೆ-ಮನೆತನಗಳು
ಉರುಳಿವೆ ಸಾಮ್ರಾಜ್ಯಗಳು
ಭೀಕರ ಕದನಗಳಿಗೆ ಕಾರಣವಾಗಿ
ಮುರಿದಿವೆ ಸಂಬಂಧಗಳು ಮನಸ್ಸುಗಳು
ಕೆಲವೊಮ್ಮೆ ಹಾರಿವೆ ಪ್ರಾಣಗಳು’[10] (ಹೆಣ್ಣು ಮತ್ತು ರಕ್ತ)

ಎಂದು ಅದರ ಮಹತ್ವವನ್ನು ಹೇಳುತ್ತಾರೆ. ಹೀಗೆ ಹೆಣ್ಣಿನ ಅಸ್ತಿತ್ವದ ಹಲವು ಆಯಾಮಗಳ ಪರಿಚಯವನ್ನು ಇಂತಹ ಪದ್ಯಗಳು ಮಾಡಿಕೊಟ್ಟಿವೆ. ಹೆಣ್ಣು-ಕಾಡು, ಹೆಣ್ಣಿನ ಹೃದಯವೊಂದು ಸ್ಮಶಾನ, ನನ್ನ ಕಾರ್ಗಿಲ್ ಮುಂತಾದವು ಈ ಬಗೆಯ ಕವಿತೆಗಳಾಗಿವೆ.

**2) ದಾಂಪತ್ಯ ಜೀವನದ ಹೊಸ ಬಗೆಯಲ್ಲಿ ಅಭಿವ್ಯಕ್ತಗೊಂಡಿರುವ ಆದರೆ ಪರಿಚಿತ ಅನುಭವಗಳು.**

ದಾಂಪತ್ಯದ ಆರಂಭದ ದಿನಗಳಲ್ಲಿ ಸಂತೋಷವನ್ನು ಈ ಹೊಸಜೀವನ ತಂದರೂ ಅಲ್ಲಿಯೂ ಅತೃಪ್ತಿಯ ಎಳೆಗಳು ಕಾಣುತ್ತವೆ. ‘ಬಿಸಿಲು ಮಚ್ಚಿನ ಬದುಕು’ವಿನಂತಹ ಕವಿತೆ ತನ್ನ ಗುಟ್ಟಾದ ಆದರೆ ಸಂತಸದ ಅನುಭವವನ್ನು ಹೇಳುತ್ತದೆ. ಅದೇ ರೀತಿ ‘ಕಿರುಗುಡುವ ಮಂಚ’ ಕವಿತೆಯೂ ಸಹ. ಆದರೆ

‘ಕತ್ತಲಲ್ಲಿ ಮುಖ ಕಾಣಿಸುವುದಿಲ್ಲ
ಕೈ ಮೇಲೆ ಮಾತ್ರ ಕಿಟಕಿಯಿಂದ ಬಿದ್ದ
ಬೆಳುದಿಂಗಳ ಕೋಲು
ನಿಟ್ಟುಸಿರುಬಿಟ್ಟು ಹಿಂದಕ್ಕೊರಗುತ್ತೇನೆ

ಸರಕ್ಕನೆ ಮಗ್ಗುಲು ಬದಲಿಸಿ
ನನ್ನತ್ತ ಬೆನ್ನು ಮಾಡುತ್ತಾರೆ
ಬೆನ್ನ ಮೇಲಿನ ಮಚ್ಚೆ ಅಣಕಿಸುತ್ತದೆ'.[11]

(ಕಿರುಗುಡುವ ಮಂಚ)

ಎನ್ನುವ ಸಾಲುಗಳಲ್ಲಿ ಹೆಣ್ಣಿನ ಲೈಂಗಿಕತೆಯ ಕಲ್ಪನೆಯನ್ನು ವ್ಯಕ್ತಪಡಿಸಲು ಅವಕಾಶವಿರದುದರ ಬಗೆಗೆ ಅತೃಪ್ತಿ ವ್ಯಕ್ತವಾಗಿದೆ. ನೇರವಾಗಿ 'ದಾಂಪತ್ಯ' ಎಂಬ ಪರಿಕಲ್ಪನೆಯನ್ನೇ ಕುರಿತು ಬರೆದ ಪದ್ಯ 'ದಾಂಪತ್ಯ'. ಗಂಡ ಹೆಂಡತಿಯರು ತಮ್ಮ ತಮ್ಮಲ್ಲೇ ಅನೇಕ ಬಗೆಯಲ್ಲಿ ಸವಾಲುಗಳಾಗಿ, ತಮ್ಮ ತಮ್ಮ ಪ್ರತಿಷ್ಠೆಗಳಿಗಾಗಿ ಕಾದಾಡಿದರೂ ದಾಂಪತ್ಯವೆಂಬುದಕ್ಕೆ ನಿಷ್ಠೆ ನಿಯತ್ತು ಕಳೆದುಕೊಳ್ಳದೇ ಬದುಕಿದುದನ್ನು ಸಮರ್ಥವಾಗಿ ಹೇಳುತ್ತದೆ.

'ಹೇಗೆ ಸೇರಿಗೆ ಸವ್ವಾಸೇರು
ಈಡಿಗೆ ಜೋಡು ತಾಳಕ್ಕೆ
ತಕ್ಕ ಮೇಳವಾಗಿದ್ದೆವು ನಾವು
ಕೋಪದುತ್ತುಂಗದಲ್ಲೂ ಮರೆಯದೇ
ಉಳಿಸಿದೆವು ಎಲ್ಲ ನಿಷ್ಠೆ ನಿಯತ್ತು.'[12] (ದಾಂಪತ್ಯ)

'ಸಂಗಾತ' ಪದ್ಯವು ಸಹ ದಾಂಪತ್ಯದಲ್ಲಿ ಇಬ್ಬರು ಎದುರಿಸಬೇಕಾದ ಸಂಘರ್ಷಗಳ ಚಿತ್ರಣ ಕಂಡುಬರುತ್ತದೆ.

'ಈ ಕೋಣೆ ಚಿಕ್ಕದು
ಇಬ್ಬರ ಕೋಪ ಹಿಡಿಸುವುದಿಲ್ಲ.
ಗಾಳಿ ಸಾಲದು ಇಬ್ಬರ ಉಸಿರಾಟಕ್ಕೆ
ಗೋಡೆಗಳು ತಾಕುತ್ತವೆ ಕೈ ಬೀಸಿದರೆ'[13] (ಸಂಗಾತ)

ಅಧುನಿಕ ಬದುಕಿನಲ್ಲಿ ಹೆಣ್ಣು ಸಹ ತನ್ನತನದ ಅರಿವಿರುವವಳಾದುದರಿಂದ ಹೊಸ ಬಿಕ್ಕಟ್ಟುಗಳು ದಾಂಪತ್ಯ ಜೀವನದಲ್ಲಿ ಕಾಣಿಸಿಕೊಳ್ಳುತ್ತವೆ. ಹೀಗಾದಾಗ

'ನಮ್ಮ ಮನೆಯಲ್ಲಿ ಇಬ್ಬರಿದ್ದೆವು
ಎರಡು ಕಾಲಗಳಲ್ಲಿ ಬದುಕುತ್ತಿದ್ದೆವು.
ನಮ್ಮ ಕೊರಳುಗಳು ಒಂದು ನೊಗಕ್ಕೆ
ಕೂಡಲೇ ಇಲ್ಲ'.[14]

ಎನ್ನುವ ಕವಿ ಕೊನೆಗೆ,

'ಎಲ್ಲ ಯಶಸ್ವಿ ಪುರುಷನ ಹಿಂದೆ
ಒಬ್ಬಳು ಮಹಿಳೆ
ಇಲ್ಲ ಯಶಸ್ವಿ ಮಹಿಳೆಯ ಹಿಂದೆ
ಒಬ್ಬ ಅತೃಪ್ತ ಪುರುಷ'[15]

ಎಂಬ ನಿಲುವಿಗೆ ಬರುತ್ತಾರೆ. ಹೆಣ್ಣು ಯಾವುದಾದರೂ ಸಾಧನೆಗೆ ಮುಂದಾದಾಗ ಗಂಡಿನ ಪ್ರತಿಕ್ರಿಯೆಯ ಕುರಿತ ಒಳನೋಟವನ್ನು ಈ ಕವಿತೆ ನೀಡುತ್ತದೆ.

'ದಾಂಪತ್ಯ–1' ಕವಿತೆ ಸಾಂಸಾರಿಕ ಜೀವನದಲ್ಲಿ ಹಲವಾರು ವರ್ಷಗಳು ಕಳೆದ ನಂತರ ಏಕತಾನತೆಯ ಬಗೆಗಿನ ಬೇಸರ ಹಾಗೂ ಈ ಸಂಬಂಧ ಪೂರ್ತಿ ಕಡಿದು ಹೋಗುವಂಥದ್ದಲ್ಲ ಎಂಬುದರ ಸೂಚನೆಗಳನ್ನು ನೀಡುತ್ತದೆ.

'ಈ ತೋರಿಕೆಯ ದಾಂಪತ್ಯ
ಏಕೆ ಕೊನೆಗೊಳ್ಳುವುದಿಲ್ಲ
ಕತೆಗೇಕೆ ಮುಕ್ತಾಯವಿಲ್ಲ?'[16] (ದಾಂಪತ್ಯ–1)

ಎಂದು ಪ್ರಶ್ನಿಸಿ

'ಏಕೆಂದರೆ ಬಚ್ಚಲು ಮನೆಯಲ್ಲಿ
ಇನ್ನೂ ಅವನ ಬೆವರಿನ ವಾಸನೆಯಿದೆ
ಆಕಸ್ಮಾತ್ ಅವನ ಷರಟಿನ ಜೇಬಿನಲ್ಲಿ
ನನ್ನ ಹೇರ್‌ಪಿನ್ ಸಿಗುತ್ತದೆ
ಅದಕ್ಕೇ'[17]

ಎಂದು ಯಾವುದೋ ಆತ್ಮೀಯತೆಯ ಎಳೆ ಇನ್ನು ಅವರ ಮನಸ್ಸಿನ ಮೂಲೆಯಲ್ಲಿರುವುದರಿಂದಲೇ ಈ ದಾಂಪತ್ಯ ಇನ್ನೂ ಉಳಿದಿದೆ ಎಂಬ ಸೂಚನೆಯನ್ನು ಕವಿತೆ ನೀಡುತ್ತದೆ.

ದಾಂಪತ್ಯ–2 ಕವಿತೆ ದಾಂಪತ್ಯ ಜೀವನದ ತಳಹದಿಯೆನ್ನಬಹುದಾದ ಲೈಂಗಿಕ ಜೀವನವು ಮುಗಿಯುತ್ತಾ ಬಂದಿರುವ ಹಂತದಲ್ಲಿ ಕವನದ ನಾಯಕಿಗೆ ಹೆಣ್ಣಿನ ಲೈಂಗಿಕತೆಯ ಬಗೆಗೆ ಪ್ರಶ್ನೆಯನ್ನು ಕೇಳಿದಾಗ ಅವಳಿಗೆ ಉತ್ತರ ಹೊಳೆಯದೆ ಹೋಗುತ್ತದೆ. ಇದನ್ನು

'ಈಗ ಕತೆ ಮುಗಿಯುತ್ತಾ ಬಂದಿದೆ
ಈಗ ತನ್ನ ಪ್ರತ್ಯೇಕ ಕೋಣೆಗೆ

ರಾತ್ರಿ ಚಿಲಕ ಹಾಕಬೇಕಾಗಿಲ್ಲ
ಹೆಣ್ಣಿನ ಲೈಂಗಿಕತೆಯ ಬಗ್ಗೆ
ಯಾರೋ ಪ್ರಶ್ನೆ ಕೇಳಿದರು
ಅರ್ಥವಾಗದೇ ಪಿಳಿ ಪಿಳಿ ನೋಡಿದೆ.'[18] (ದಾಂಪತ್ಯ-2)

ಎಂದು ಹೇಳಿಕೊಳ್ಳುತ್ತಾರೆ. ಇಲ್ಲಿ ಹೆಣ್ಣಿನಿಂದ ತನಗೆ ದೊರೆಯುವ ಲೈಂಗಿಕತೆಯ ಬಗೆಗೆ ಚಿಂತಿಸುವ ವ್ಯವಸ್ಥೆ, ಅವಳಿಗಿರಬಹುದಾದ ಲೈಂಗಿಕತೆಯ ಕಲ್ಪನೆಗೆ ಆಸ್ಪದ ನೀಡಿಲ್ಲದೆ ಇರುವುದನ್ನು ಸೂಚಿಸಲಾಗಿದೆ.

**3) ಆಧುನಿಕ ನಗರ ಕೇಂದ್ರಿತ ಮಧ್ಯಮ ವರ್ಗದ ಗೃಹಿಣಿಯ ಜೀವನದ ಚಿತ್ರಗಳು :**

ಮಧ್ಯಮವರ್ಗದ ನಗರದಲ್ಲಿ ವಾಸಿಸುವ ಹೆಂಗಸರ ದೈನಂದಿನ ಕೆಲಸಗಳನ್ನು ನಗುನಗುತ್ತಾ ಮಾಡುವ, ವಿದ್ಯಾವಂತಳಾದರೂ ಸಾಂಪ್ರದಾಯಿಕ ಚೌಕಟ್ಟಿನಲ್ಲಿಯೇ ಬದುಕುವ ಗೃಹಿಣಿಯು ತನ್ನತನವನ್ನು ಬಿಟ್ಟು ಮನೆಯನ್ನು ಸಂಭಾಳಿಸುವುದರಲ್ಲಿಯೇ ಕಳೆದು ಹೋಗುವ ಪರಿಯನ್ನು 'ಗೃಹಿಣಿಗೀತ' ಕವಿತೆ ಚಿತ್ರಿಸುತ್ತದೆ. ಎಲ್ಲ ಕೆಲಸಗಳನ್ನು ಮುಗಿಸಿ ರಾತ್ರಿ ಕವನ ರಚಿಸಲು ಕುಳಿತಾಗ ಅಮ್ಮನನ್ನು ಹುಡುಕುತ್ತಾ ಮಗಳು ಎದ್ದು ಬರುತ್ತಾಳೆ.

'ನಡುರಾತ್ರಿ ಮಗಳೆದ್ದು
ಹುಡುಕುತ್ತಾ ಬಂದಾಗ
ಕವನ ರಚಿಸುತ್ತಿದ್ದ ಕೈ ಕ್ಷಣ ನಿಂತಿತು
ಮುದ್ದನ್ನೆತ್ತಿ ರಮಿಸಿ ತಟ್ಟಿ ಮಲಗಿಸಿತು
ಮತ್ತೆ ಬಂದು ಕೂತರೆ
ಕವನ ನಿದ್ದೆ ಹೋಗಿತ್ತು'.[19] (ಗೃಹಿಣಿಗೀತ)

ಹೀಗೆ ತನ್ನ ಅಭಿವ್ಯಕ್ತಿಗೆ ಇರುವ ಅಡ್ಡಿ ಆತಂಕಗಳನ್ನು ಸಮರ್ಥವಾಗಿ ಈ ಕವಿತೆ ಹಿಡಿದಿಡುತ್ತದೆ. 'ಬರವಣಿಗೆಯ ಮಟ್ಟಿಗೆ ಸ್ತ್ರೀಯರ ಸಮಸ್ಯೆ ಬೇರೆ ಮತ್ತು ಪುರುಷರ ಸಮಸ್ಯೆ ಬೇರೆ. ಬರವಣಿಗೆಯೆನ್ನುವುದು ಮಹಿಳೆಗೆ ವಿರಾಮ ಮತ್ತು ವಿಶ್ರಾಂತಿಯ ನಡುವಣ ಕೆಲಸವಲ್ಲ. ಮಗುವನ್ನು ಮುದ್ದು ಮಾಡಿ ಮಲಗಿಸಿದ ಮೇಲೆ ಮತ್ತೆ ಬಂದು ಕೂತರೆ ಕವನ ನಿದ್ದೆ ಹೋಗುತ್ತದೆ. ಸ್ತ್ರೀಯರ ನಿಜವಾದ ಸಮಸ್ಯೆಯಿದು'.[20]

ಉದ್ಯೋಗಸ್ಥ ಮಹಿಳೆಯ ದೈನಂದಿನ ಚಟುವಟಿಕೆಯನ್ನು ಅದರ ಯಾಂತ್ರಿಕತೆಯನ್ನು ಬಹಳ ಯಶಸ್ವಿಯಾಗಿ ನಿರೂಪಿಸುವ ಮತ್ತೊಂದು ಕವಿತೆ 'ಕೇರ್ ಫ್ರೀ ಮಹಿಳೆಯರು'. ಈ ಶೀರ್ಷಿಕೆಯು ಮೂರು ಅರ್ಥಗಳನ್ನು ಹೊರಡಿಸುವಂತಿದೆ. ಸ್ವತಂತ್ರವಾದ ಅಥವಾ ಯಾವುದಕ್ಕೂ ಅಂಜದ ಮಹಿಳೆಯರು ಎಂಬುದು, 'ಕೇರ್ ಫ್ರೀ' ಎಂಬ ಆಧುನಿಕ ಮಹಿಳೆಗೆ ವರದಂತಿರುವ ಸ್ಯಾನಿಟರಿ ನ್ಯಾಪ್‌ಕಿನ್‌ನ ಬಳಕೆದಾರರು ಎಂದಿರಬಹುದು ಅಥವಾ ಉದ್ಯೋಗ, ಮನೆ ಎರಡೂ ನೆಲೆಗಳನ್ನು ಸಂಭಾಳಿಸಿಕೊಂಡು ಹೋಗುವ ಇವರನ್ನು ರಕ್ಷಿಸುವವರಿಲ್ಲ(ಕೇರ್ ಫ್ರೀ)ದಿರುವುದನ್ನು ಸೂಚಿಸುತ್ತಿರಬಹುದು. ಹೀಗೆ ಯಾವ ಅರ್ಥದಲ್ಲಿಯೇ ಓದಿದರೂ ಯಾಂತ್ರಿಕ ಜೀವನದ ಚಿತ್ರಣವನ್ನು ಆದರೆ ಈ ಜೀವನದ ಬಗೆಗೆ ಬೇಸರವಿಲ್ಲದ ಉತ್ಸಾಹದ ವಿವರವನ್ನು ಈ ಕವಿತೆಯಲ್ಲಿ ನೀಡಿದ್ದಾರೆ.

> 'ಕನಸು ಬೀಳದ ರಾತ್ರಿ ಮುಂಜಾನೆ ಅಲಾರಂ
> ಹೊಡೆತಕ್ಕೆ ಎದ್ದು ಟೀವಿ ಪಕ್ಕದ ಗಿಡಕ್ಕೆ ನೀರೆರೆದು
> ಪ್ಯಾಕೇಟಿನ ಬಸರಿಗೆ ಕತ್ತರಿ ಚುಚ್ಚಿ
> ವಯಕ್ಕನೆ ವಾಂತಿ ಮಾಡುವ ಹಾಲು ಹಿಡಿದು
> ಸ್ಟ್ರಾಂಗ್ ಕಾಫಿ. . . . . . . ..
> . . . . .. . . . . . . . .. . . .'[21]
>
> (ಕೇರ್ ಫ್ರೀ ಮಹಿಳೆಯರು)

ಹೀಗೆ ಯಾಂತ್ರಿಕತೆಯ ಜೀವನಕ್ಕೆ ಹೊಂದಿಕೊಂಡವರು.

> 'ಕಾಮನ ಬಿಲ್ಲಿನ ಹಿಂದೆ ಓಡುವವರಿಗೆ
> ದಣಿವಿಲ್ಲ ನಿಂತಲ್ಲೇ ಸುತ್ತು ಹೊಡೆಯುತ್ತಾ
> ಒಂದೇ ಮೆಟ್ಟಿಲನ್ನು ಏರಿ ಇಳಿಯುತ್ತಾ
> ಸೂಪರ್ ಬಜಾರಿನ ಸಾಲುಗಳ ನಡುವೆ
> ಕೇರ್ ಫ್ರೀ ಮಹಿಳೆಯರು ಕಳೆದು ಹೋಗುತ್ತಾರೆ.
> ಇಪ್ಪತ್ತೈದು ರೂಪಾಯಿ ನೈಟಿಗಳಲ್ಲಿ
> ವ್ಯಾನಿಷಿಂಗ್ ಕ್ರೀಮುಗಳಲ್ಲಿ ಮಾಯವಾಗುತ್ತಾರೆ'.[22]

ಬಂಡವಾಳಶಾಹಿಯು ನಿರ್ಮಿಸಿರುವ ಸರಕು ಸಂಸ್ಕೃತಿಯ ಸೆಳೆತಕ್ಕೆ ಒಳಗಾದ ಇವರು ಕಾಮನಬಿಲ್ಲನ್ನು ಹಿಡಿಯಲು ಹೊರಟವರು ಅಥವಾ ಸ್ವತಂತ್ರವನ್ನು ಅರಸುತ್ತಾ ಹೊರಟವರು. ತಮ್ಮ ಅರಿವಿಗೆ ಬಾರದೇ ಅವರು ನಿಂತಲ್ಲೇ ಸುತ್ತು ಹೊಡೆಯುತ್ತಾರೆ ಎಂಬ ವಿಷಾದದ ಧ್ವನಿಯೂ ಇಲ್ಲಿದೆ.

4) **ಲೈಂಗಿಕ ನೆಲೆಯನ್ನೇ ಪ್ರಧಾನವಾಗಿರಿಸಿಕೊಂಡಿರುವ ಕವಿತೆಗಳು.**

ಹೆಣ್ಣನ್ನು ಲೈಂಗಿಕ ವಸ್ತುವಾಗಿ ನೋಡುವ ಗಂಡು ತನ್ನ ದೇಹದ ರಚನೆಯ ಬಗೆಗೆ ಅಹಂಕಾರ ಹೊಂದಿರುವುದು ಹಾಗೂ ಈ ದೃಷ್ಟಿಯಿಂದ ಹೆಣ್ಣಿಗೆ ಹೋಲಿಸಿದಲ್ಲಿ ತನ್ನನ್ನು ಮೇಲ್‌ಸ್ತರದವನು ಎಂದು ತಿಳಿದುಕೊಂಡಿರುವುದು ಶತಮಾನಗಳಿಂದಲೂ ಕಂಡು ಬಂದಿರುವಂತಹದು. ಇಂತಹ ಅಧಿಕಾರ ಸಹಜವಾಗಿ ಬಂದಿರುವುದಲ್ಲ ಬದಲಿಗೆ ಕಲ್ಪಿತ ಎಂಬುದನ್ನು ಹೆಣ್ಣನ್ನು ಅವಳ ಲೈಂಗಿಕ ನೆಲೆಯಲ್ಲಿ ಪರಿಕಲ್ಪನೆಗಳಲ್ಲಿ ಕಟ್ಟಿಕೊಡುವ ಮೂಲಕ ಇಂತಹ ನಂಬಿಕೆಗಳನ್ನು ಒಡೆಯುತ್ತಾರೆ. 'ಆಹಾ, ಪುರುಷಾಕಾರಂ!', 'ರಾಸಕ್ರೀಡೆ ಮತ್ತು ನಂತರ', ಮುಂತಾದ ಕವಿತೆಗಳು ಇದಕ್ಕೆ ನಿದರ್ಶನಗಳು.

'ಆಹಾ, ಪುರುಷಾಕಾರಂ!' ಕವಿತೆಯಲ್ಲಿ ಪುರುಷನ ಅಹಮಿಕೆಗೆ ಕಾರಣವಾದ ಅಂಶಗಳತ್ತ ನಮ್ಮ ಗಮನ ಸೆಳೆದು ಅನಂತರ ಹೆಣ್ಣಿನ ರೂಪವೇ ರೂಪ ಅದರಲ್ಲಿಯೂ ಪ್ರಣಯಮತ್ತ ಸ್ತ್ರೀ ರೂಪ ಎಂದು ಹೇಳುವ ಮೂಲಕ ಪುರುಷನ ಅಹಮಿಕೆಗೆ ಆಘಾತವುಂಟು ಮಾಡುವ ಶಕ್ತಿಯನ್ನು ಕವಿ ಪ್ರಕಟಿಸುತ್ತಾರೆ.

'ಪರಮೋಚ್ಚ ಸೌಂದರ್ಯ
ಜೊತೆಗೆ ಗರ್ವಕಾರಣ ವೀರ್ಯ
ಉಪಾಸನೆಯ ಸಂತ
ಕಾಮ ವಿಕಾರ ರೂಪಹಂತ
ರಜನೀಶ ಸ್ವಂತ
ತಿಳಿಯದ ತಿಳಿ
ತಿಳಿದ ರಾಡಿ'[23] (ಆಹಾ, ಪುರುಷಾಕಾರಂ!)

ಎಂದು ಪುರುಷನ ಸೌಂದರ್ಯದ ಬಣ್ಣನೆ ಮಾಡುವ ಇವರು ಈ ಅಹಮಿಕೆಗೆ ಸಮಾನಾಂತರವಾಗಿ ಹೆಣ್ಣಿನ ರೂಪವೇ ಶ್ರೇಷ್ಠ ಎಂಬ ನಿಲುವಿಗೆ ಬರುತ್ತಾರೆ.

'ಸ್ತ್ರೀ ರೂಪಮೇ ರೂಪಂ
ನಿರ್ದಿಷ್ಟವಾಗಿ
ಪ್ರಣಯಮತ್ತ ಸ್ತ್ರೀ.. . . . .'[24]

ಎಂಬ ಸಾಲುಗಳಲ್ಲಿ ಇದು ವ್ಯಕ್ತವಾಗಿದೆ.

‘ಕಾಮ’ವನ್ನೇ ಕೇಂದ್ರವಾಗಿರಿಸಿಕೊಂಡಿರುವ ‘ರಾಸಕ್ರೀಡೆ ಮತ್ತು ನಂತರ’ ಕವನ ಸಮಾಜವು ಗಂಡಿನ ಲೈಂಗಿಕ ಶಕ್ತಿಯನ್ನು ಅಧಿಕಾರಕ್ಕೆ ಕಾರಣವಾದದ್ದು ಎಂದು ಬಿಂಬಿಸುವ ಮಾದರಿಯನ್ನು, ಅಲ್ಲಿ ಹೆಣ್ಣಿನ ಪಾತ್ರವನ್ನು ಎದುರಿಗಿಟ್ಟು ಅಂತಹ ನಂಬಿಕೆಯನ್ನು ವೈರುಧ್ಯದ ನೆಲೆಯಲ್ಲಿಟ್ಟು ಒಡೆಯುವ ಪ್ರಯತ್ನ ಮಾಡುತ್ತಾರೆ.

‘ಶಾಶ್ವತ ಗುರುತುಗಳು ಅವನ ಏರಿಳಿವ ಎದೆಯಲ್ಲಿ
ಅವಳ ಒಡಲಲ್ಲಿ ಬಿರಿದ ತುಟಿ ತೊಡೆಯ ಸ್ನಾಯುಗಳಲ್ಲಿ
ಹಿತದ ನೋವು. ಇದು ಲಕ್ಷಾಗೃಹಕ್ಕಿದು ಮತ್ತೊಂದಕ್ಕೆ ಎಂದು
ಎಣಿಸೆಣಿಸಿ ಬೀಸಿದ ಗದೆಪೆಟ್ಟಿಗೆ ಕುಸಿದವನಂತೆ ತನ್ನ
ದಾಳಿಗೆ ಹೈರಾಣಾಗಿ ಪವಡಿಸಿದ್ದ ಅವನು ಅವಳ ಪೃಷ್ಠಕ್ಕೊಂದು
ಕೈಕೊಟ್ಟು ಸೆಳೆಯುವವನಂತೆ ಈಗಲೇ ಇನ್ನೆರಡು ಕ್ಷಣಗಳಲ್ಲಿ
ಮತ್ತೆ ತೊಡಗುವವನಂತೆ ರಾಸಕ್ರೀಡೆಗೆ’[25]

(ರಾಸಕ್ರೀಡೆ ಮತ್ತು ನಂತರ)

‘ಕಥಾನಕ’, ಕವಿತೆಯು ಸ್ತ್ರೀ–ಪುರಷರ ಲೈಂಗಿಕ ಸಂಬಂಧದಲ್ಲಿ ಹೆಣ್ಣಿನ ಮೇಲುಗೈ ಸಾಧ್ಯವಾಗುವ ಬಗೆಯನ್ನು ತಿಳಿಸುವುದರೊಂದಿಗೆ ಅವಳ ಲೈಂಗಿಕತೆಯ ಪರಿಕಲ್ಪನೆಗೆ ಸಮಾಜವು ಅವಕಾಶ ಮಾಡಿಕೊಟ್ಟಿರದುದರ ವಾಸ್ತವವನ್ನು ನಮ್ಮ ಮುಂದಿಡುತ್ತಾರೆ.

‘ಬಸಿರ ಕಥಾನಕದಲ್ಲಿ
ಹಾಗೆ ಎದ್ದು ಹೋದರೆ ಏನೀಗ
ಏನೀಗ ಯೋನಿಗೆ ಅಪಚಾರವಾದರೆ?
ಏನಿಲ್ಲ
ಬಿಟ್ಟುಕೊಡುವುದೇ ಇಟ್ಟುಕೊಳ್ಳುವ ಏಕೈಕ ಉಪಾಯ
ಎಂದು ಹೊಳೆದಿದ್ದೇ ಇಬ್ಬರಿಗೂ ನಿಚ್ಚಳ ಗೊತ್ತಾಗಿಬಿಟ್ಟಿತು
ಅವನ ಭವಿಷ್ಯದಲ್ಲಿ ಅವಳಿಲ್ಲ
ಅವಳ ಚರಿತ್ರೆಯೊಳಗೆ ಅವನಿದ್ದಾನೆ.’[26] (ಕಥಾನಕ)

ಎಂಬುದು ಸಮಾಜವು ಹೆಣ್ಣಿಗೆ ಲೈಂಗಿಕ ಸಂಬಂಧದ ವಿಷಯದಲ್ಲಿ ಅತಿ ಕಟ್ಟುನಿಟ್ಟಿನ ಕ್ರಮವನ್ನು ರೂಪಿಸಿರುವುದನ್ನು ತೋರುತ್ತದೆ.

5) **ಇತರ ಸಂಬಂಧಗಳೊಂದಿಗೆ ತನ್ನನ್ನು ಗುರುತಿಸಿಕೊಳ್ಳುವ ಬಗೆ:**

ಸ್ತ್ರೀ ಪುರುಷರ ನಡುವಿನ ಸಂಬಂಧವಲ್ಲದೆ ತಾಯಿಯೊಂದಿಗಿನ ಸಂಬಂಧವನ್ನು ಕವಿ ಕವಿತೆಯಾಗಿಸಿದ್ದಾರೆ. ತಾಯಿಯು ತನ್ನ ಬದುಕನ್ನು ಮಕ್ಕಳ ಲಾಲನೆ ಪಾಲನೆಯಲ್ಲಿ ಕಳೆದು, ಜೀವನದ ಆಗುಹೋಗುಗಳಿಂದ ಸಾಕಷ್ಟು ಕಲಿತಿದ್ದಾಳೆ. ಅವಳು ಇಂದು ಪರಿಪಕ್ವಳಾಗಿ ಎಂಥ ನೋವಿನಲ್ಲೂ ನಗುವುದನ್ನು ಮರೆತಿಲ್ಲ. ಈ ಜೀವನದ ಬಗೆಗಿನ ಪ್ರೀತಿಯನ್ನು ಕವಿ ಹೀಗೆ ಬಿಚ್ಚಿಡುತ್ತಾರೆ.

'ಮಾಗದ ಕಾಲ ಗಾಯದ ನೋವಿನಲ್ಲಿ
ಹಿಡಿದಿಡುವ ಹೆಜ್ಜೆ ತಡೆ ತಡೆಯುವ ಮಾತಿನಲ್ಲಿ
ಜೀವನೋತ್ಸಾಹಕ್ಕೆ ಎಳ್ಳಷ್ಟು ಕುಂದಿಲ್ಲದೆ
ಜವರಾಯನ ಹಾಸ್ಯ ಮಾಡುತ್ತಾ
ಏನೊಂದೂ ತಕರಾರಿಲ್ಲದೆ ಮಿನುಗುತ್ತಿದ್ದಾಳೆ
ನನ್ನಂತರಂಗ ತೆರೆದಿದ್ದಾಳೆ'[27] (ಅಮ್ಮ)

ಎಂತಹ ಬಂಧನಗಳಿದ್ದರೂ, ಅಡೆತಡೆಗಳಿದ್ದರೂ, ಸಾವಿನ ಬಳಿ ನಿಂತಿದ್ದರೂ ಅದನ್ನು ನಕ್ಕು ಸ್ವೀಕರಿಸುವ ತಾಯಿಯ ಪಕ್ವತೆ ಕವಿಯ ಮನಸ್ಸಿಗೆ ಹೊಸ ಬಲವನ್ನು, ಬೆಳಕನ್ನು ನೀಡುತ್ತದೆ. ಅಮ್ಮ-3 ಕವಿತೆ ತಾಯಿಯ ಜೀವನವೆಲ್ಲ ಯಾವ ರೀತಿ ತನ್ನ ಎಷ್ಟೋ ಅನಿಸಿಕೆಯನ್ನು ನನಸು ಮಾಡಿಕೊಳ್ಳಲಾಗದ ಅಸಹಾಯಕ ಪರಿಸ್ಥಿತಿಯಲ್ಲಿ ಕಳೆದಳೆಂಬುದನ್ನು ಬಹಳ ನಿರ್ಲಿಪ್ತವಾಗಿ ವಿವರಿಸುತ್ತಾರೆ.

'ಚಕ್ಕಿ ಬೀಸುವ ಶಿಕ್ಷೆ
ಸದಾ ಹಗ್ಗದ ಮೇಲೆ ನಡೆಯುವ ಸರ್ಕಸ್ಸು
ದಡ್ಡತನದ ಗೇಲಿಗೆ ಗುರಿ
ಗುದ್ದಿಗೆ ಸಾಧನ ಬೈಯ್ಗುಳದ ತೀಟೆಗೆ ಆಹ್ವಾನ
ಹಿತ್ತಲಿನ ತೆಂಗು ಬೆನ್ನಿಗಾಸರೆ
ಕಣ್ಣ ಹನಿಗೆ ಸಾಕ್ಷಿ
ನಡುರಾತ್ರಿಯ ಕತ್ತಲಲ್ಲಿ
ದೀಪವಿಲ್ಲದ ಹಾದಿ ಸದ್ದಿಲ್ಲದ ಸ್ಪರ್ಶ
ಎಂದಿಗೂ ಪೂರ್ತಿ ಅರಳದ ಮೊಗ್ಗು'[28] (ಅಮ್ಮ-3)

ಹೀಗೆ ತಾಯಿಯ ಬದುಕು ಇಕ್ಕಟ್ಟಿನಲ್ಲಿಯೇ ಮುಗಿದು ಹೋದರೆ ಮಗಳದು ಇಂದು ಬದಲಾವಣೆಯನ್ನು ಕಂಡಿದೆ. ಮದುವೆಯ ಸಂಬಂಧವೂ ಸುಲಭವಾಗಿ

ಕಳಚಬಲ್ಲುದಾಗಿ ಅವಳಿಗೆ ಕಂಡಿದೆ. ತಂತ್ರಜ್ಞಾನದ ಮಾಂತ್ರಿಕತೆಗೆ ಹೆಣ್ಣು ಸಿಕ್ಕಿರುವುದನ್ನು ಇದೇ ಕವಿತೆ ಸೂಚಿಸುತ್ತದೆ.

'ಈಗೆಲ್ಲ ಮೂರು ಗಂಟೆಗೆ ಬದಲು
ಕೊಂಡಿ ಬೆಸುಗೆ ಹಾಕಿ ಇಳಿಬಿಡುತ್ತಾರೆ
ತೆಗೆದು ಹಾಕಲು ಸುಲಭ
ಸಿಸೇರಿಯನ್, ಬೇಬಿಸಿಟ್ಟಿಂಗ್, ವೆಟ್‌ಗ್ರೈಂಡಿಂಗ್
ಬಾವಿಕಟ್ಟೆಯ ನೆನಪು ಮಾಸಿ
ನೀವೆ ವಾಸಿ ಎಂದು
ಪಿಸುಗುಡುವ ವಿಸ್ಪರು
ಮೂವತ್ತೂ ದಿನಗಳೂ ಒಳಹೊರಗೆ
ಬಸುರಿಯ ಸ್ಕೂಟರು ಸವಾರಿ
ಬಾಣಂತಿಗೆ ಐಸ್ ಕ್ರೀಂ'.[29]

ಹೀಗೆ ತಾಯಿಯ ಬದುಕಿಗೆ ಇಂದಿನ ಹೆಣ್ಣು ಮಕ್ಕಳ ಬದುಕನ್ನು ಒರೆಹಚ್ಚಿ ನೋಡುವ ಕ್ರಮ ಇಲ್ಲಿ ಕಾಣಿಸುತ್ತದೆ. ಇನ್ನು ಮುಂದಿನ ಪೀಳಿಗೆಯಾದ ಮಗಳಿಗೆ, ತನ್ನಂತೆ ಹೆಣ್ಣಾದ ಮಗಳಿಗೆ ತನ್ನ ಗರ್ಭದಲ್ಲಿರುವಾಗಲೇ ಶುಭ ಹಾರೈಸುವ ಪರಿ 'ಮಗಳಿಗೆ' ಕವಿತೆಯಲ್ಲಿ ಕಾಣುತ್ತದೆ.

'ಕೈಬಿಟ್ಟ ಕನಸುಗಳನೆಲ್ಲ ನನಸಾಗಿಸಿ
ನಡುವಿನ ಗೋಡೆಗಳ ಕೆಡವಿ
ನಾ ಮುಟ್ಟಲಾರದ ಗುರಿಯ ಸೇರಿಬಿಡು
ಏರಿಬಿಡು ನಾ ಏರಲಾರದ ಮಹಲು'[30] (ಮಗಳಿಗೆ)

ಇದು ಶುಭ ಹಾರೈಕೆಯಷ್ಟೇ ಅಲ್ಲದೆ ತನ್ನ ಬದುಕಿನಲ್ಲಿ ಮುಟ್ಟಲಾಗದ ಕನಸಿನ ಗುರಿಗಳನ್ನು ಮಗಳು ಮುಟ್ಟುವುದರ ಮೂಲಕ ತನ್ನ ಬದುಕನ್ನು ಸಾರ್ಥಕ್ಯಗೊಳಿಸಬೇಕೆಂದು ಹಾರೈಸುತ್ತಾರೆ.

ತಂದೆಯೊಂದಿಗೆ ತನ್ನ ಸಂಬಂಧದ ಸ್ವರೂಪವನ್ನು ಗುರುತಿಸುವಾಗ ಪ್ರತಿಭಾ ಅವರು ಆ ಪಾತ್ರದ ನಿಜವಾದ ಅರ್ಥದ ಹುಡುಕಾಟದಲ್ಲಿದ್ದಾರೆ. ಈ ನೆಲೆಯಿಂದ ಎಚ್.ಎಸ್.ಆರ್. ರವರು ಮಗಳೆನ್ನುವುದು ಬಿಟ್ಟರೆ ಮತ್ತೊಂದು ತಿಳಿಯದ ತಂದೆಯಿಂದ ಮುದ್ದು ತಂದೆಯವರೆಗೆ ಈ ಹುಡುಕಾಟದ ಹರಹಿದೆ. ಅಂಕಲ್, ತಂದೆ, ಅವರು ಮುಂತಾದ ಹಲವು ಹೆಸರುಗಳಲ್ಲಿ ಪ್ರತ್ಯಕ್ಷವಾಗುವ ಈ ಸಂಬಂಧವು, ಪ್ರತಿಭಾ ಅವರು

ಸಾಮಾನ್ಯವಾಗಿ, ಕಂಡರಿಸುವ ಕ್ರೌರ್ಯ, ಲೈಂಗಿಕ ತೀವ್ರತೆ, ಉಡಾಫೆ ತಾರುಣ್ಯ ಮುಂತಾದ ಪುರುಷ ಲಕ್ಷಣಗಳಿಂದ ಮುಕ್ತವಾದ ವ್ಯಕ್ತಿತ್ವಗಳನ್ನು ಚಿತ್ರಿಸುತ್ತದೆ. ಪ್ರತಿಭಾ ಅವರ ಪ್ರಮುಖ ಕರ್ಷಣ ಮತ್ತು ಶಕ್ತಿಗಳು ಈ ಎರಡು ಮುಖಗಳ ನಡುವಿನ ಲೋಲಕ ಚಲನೆಯಲ್ಲಿ ಕಂಡುಬರುತ್ತವೆ. ಇದು ಕವಿಯ ವೈಯಕ್ತಿಕ ಪ್ರಶ್ನೆಯಾಗಿದ್ದರೆ ನಮಗೆ ಅಪ್ರಸ್ತುತವಾಗುತ್ತಿತ್ತು. ಆದರೆ ಹಯವದನ, ಸಿರಿಸಂಪಿಗೆಗಳಿಂದ ಹಿಡಿದು ಹತ್ತು ಹಲವು ಕಡೆ ನಡೆದಿರುವ ಈ ಶೋಧವು ಮನುಷ್ಯ ಜೀವಿತದ ಪ್ರಮುಖ ಶೋಧಗಳಲ್ಲಿ ಒಂದೆಂದು ನಾನು ತಿಳಿಯುತ್ತೇನೆ'.[31] ಎಂದು ಹೇಳುತ್ತಾರೆ.

'ಮುದ್ದು ತಂದೆ' ಕವಿತೆ ತಂದೆಯೊಂದಿಗೆ ತನ್ನ ಸಂಬಂಧದ ಸ್ವರೂಪವನ್ನು ಹೇಳುತ್ತಲೇ ಬೇರೆಯವರೂ ತಂದೆತನದ ಕಾಳಜಿಗಳನ್ನು ತೋರುವುದರ ಬಗೆಗೆ ಬೆರಗಿನಿಂದ ನೋಡುವ, ಆದರೆ ಆ ಕಾಳಜಿ ಎಂಥದೆಂದು ಪೂರ್ತಿ ತಿಳಿದುಕೊಳ್ಳಲಾಗದ ಗೊಂದಲ ಕವಿತೆಯ ನಾಯಕಿಗೆ ಇರುವುದನ್ನು ಸ್ಪಷ್ಟಪಡಿಸುತ್ತದೆ.

'ಸದ್ದಡಗಿಸುವ ದರ್ಪದ ತಂದೆಯರ ಮಕ್ಕಳ
"ನಿಮ್ಮಪ್ಪ ಎಷ್ಟು ಜಾಲೀ ಕಣೇ"ಗೆ
ಉಗುಳು ನುಂಗುವ ನಾನು
ಅಸ್ವಸ್ಥ ಕಣ್ಣು-
ಮಗಳೆನ್ನುವುದು ಬಿಟ್ಟರೆ ಮತ್ತೊಂದು
ತಿಳಿಯದ ಅಪರಿಚಿತ ಕೊನೆಯವರೆಗೂ
ನಡುವಿನ ಗೋಡೆ ಕೆಡವಲಾಗದ ಅಸಹಾಯ
ಮಾತಿಗಿಳಿಯದ ಮೌನ ಕೋಪವಾಗದ ತಾಪ
ಪ್ರೀತಿಸಲಿಲ್ಲ ಹಾಗೆಂದು ಭ್ರಮಿಸಲೂ ಇಲ್ಲ' [32] (ಮುದ್ದು ತಂದೆ)

ಹೀಗೆ ತನ್ನ ತಂದೆಯ ಬಿಗುವಿನಲ್ಲಿ ದೂರ ಉಳಿದುಬಿಟ್ಟ ಮಗಳು ಮತ್ತೊಬ್ಬರಲ್ಲಿ ಅಪ್ಪನನ್ನು ಕಾಣಲು ಯತ್ನಿಸುತ್ತಾಳೆ.

'ಈ ಅಪ್ಪ ಹಾಗಲ್ಲ
..................................
..................................
..................................

ಮಾತಾಡದಿದ್ದರೆ ಮಹಾ ಸಂಗ್ರಾಮ
ಮರೆತರೆ ಮರೆ ಮಾಡಿದರೆ ಮುಗಿದ ಸಂಭ್ರಮ
ಮನಸಾರ ಕೋಪ ಮೈ ತುಂಬ ಕಚಗುಳಿ
ಜೊತೆಗೆ ಉಪದೇಶ ಉಪನ್ಯಾಸ ಮುಷ್ಕರ
ತಣಿಸಿ ಒಲಿಸಿ ಕಾಲೊತ್ತುವ ಒತ್ತಾಯ
ನಿಶ್ಚಿಂತೆಯಲ್ಲಿ ನಿದ್ದೆಗಿಳಿದವನನ್ನು ನೋಡುತ್ತ
ಅರ್ಥವಾಗದ ಗೊಂದಲ ಮನದ ತುಂಬ.'[33]

'ಹಕ್ಕಿ', 'ಬಿಸಿಲುಕುದುರೆ' ಕವಿತೆಗಳು ತನಗೆ ದೊರೆತ ತಂದೆ ನೀಡಬಲ್ಲವೆನಿಸಬಹುದಾದ ಬೆಚ್ಚನೆಯ ಅನುಭವವನ್ನು ನಿರೂಪಿಸುತ್ತವೆ. ಕ್ಷಣಮಾತ್ರದ ಅನುಭವವೇ ಆಗಿರಲಿ, ಜೀವನದ ಕೆಲವು ವರ್ಷಗಳಲ್ಲಿ ತನ್ನ ಜೊತೆಗಿರಲಿ ಅಲ್ಲಿ ದೊರೆತ ಪೋಷಕ ಭಾವ ಮುಖ್ಯವಾದುದಾಗಿ ಕವಿಗೆ ಕಂಡಿದೆ.

'ತೀರಿ ಎರಡು ರೆಕ್ಕೆಯ ನಡುವೆ ನೆಲಜಲದ
ಋಣ ಹರಿದು ಮುತ್ತು ಹವಳದ ಜಾಲ
ತೆಕ್ಕೆ ಬಿದ್ದಳುವ ಗಿಳಿಗೆ ಮೆಣಸು ತಿನ್ನಿಸಿ
ಹೆಸರಿಲ್ಲದ ಹಾವಸೆಯ ಮೇಲೆ ಚಿತ್ತಾರ ಬಿಡಿಸಿ
ಮರಳುಗಾಡಲ್ಲಿ ಒಂಟಿ ಬಿಟ್ಟು ಹೋಯಿತು.'[34]

(ಬಿಸಿಲುಕುದುರೆ)

'ಬಿಸಿಲುಕುದುರೆ' ಕವನದ ಈ ಸಾಲುಗಳಲ್ಲಿ ಎಷ್ಟೋ ಕಾಲದಿಂದ ಜೊತೆಯಲ್ಲಿದ್ದ ಹಕ್ಕಿ ಹೊರಡಬೇಕಾದ ಸಂದರ್ಭ ಬಂದಾಗ ಗಿಳಿಗೆ ಮೆಣಸು ತಿನ್ನಿಸಿ ರಮಿಸಿ ಹೊರಟು ಹೋದ ನಂತರ ಅದರ ಬದುಕು ಮರಳುಗಾಡಿನಂತೆ ಕಾಣುವುದು ಅನಾಥ ಪ್ರಜ್ಞೆಯನ್ನು ಉಂಟುಮಾಡುವುದರ ಸಂಕೇತವಾಗಿ ಕಾಣುತ್ತದೆ. ಹಾಗೆ ತಂದೆಯ ಪ್ರೀತಿ, ಮಮತೆಗಳ ಹುಡುಕಾಟ ಭಿನ್ನ ಬಗೆಯಲ್ಲಿ ನಡೆದಿದೆ ಎನ್ನಬಹುದು.

ಪ್ರತಿಭಾ ಅವರ 'ಈ ಮಾರ್ಗವು ಚಾಲನೆಯಲ್ಲಿಲ್ಲ' ಕವಿತೆಯು ಬಗೆಗೆ ವಿಮರ್ಶಕರು, ಈ ಕವಿತೆಯು ಸಾರ್ಥಕ ಸಂಬಂಧಗಳೆನ್ನುವುವು ಇರುವುದಿಲ್ಲ ಬದಲಾಗಿ ಸಾರ್ಥಕ ಕ್ಷಣಗಳನ್ನು ಮಾತ್ರ ಈ ಸಂಬಂಧಗಳಿಂದ ನಾವು ನಿರೀಕ್ಷೆ ಮಾಡಬಹುದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. 'ಕೊನೆಗೂ ಸಾರ್ಥಕ ಸಂಬಂಧಗಳೆನ್ನುವುದು

ಮನುಷ್ಯಕುಲದ ಕನಸೇ ವಿನಾ ನಿಜದ ನೆಲೆಯಲ್ಲಿ ದೊರಕಲಾರವೇನೊ! ಮನುಷ್ಯರಿಗೆ ಸಿಗುವುದು ಸಾರ್ಥಕ ಕ್ಷಣಗಳೇ ವಿನಾ ಸಾರ್ಥಕ ಸಂಬಂಧಗಳಲ್ಲ!'[35]

'ಅವರು ತಮ್ಮ ಮಾರ್ಗವನ್ನು ಚಾಲನೆಯಲ್ಲಿಟ್ಟಿಲ್ಲ
ಸಂಪರ್ಕ ಏರ್ಪಡುತ್ತಿಲ್ಲ. ಸಾಧ್ಯವೇ ಇಲ್ಲ
ಮಾರ್ಗ ಕವಲೊಡೆದು ದಾರಿ ಕಾಣದಾಗಿದೆ
ರಾಘವೇಂದ್ರನೇ, ಬೆಳಕು ತೋರಬೇಕಾಗಿಲ್ಲ
ಅದರ ಅಗತ್ಯವಿಲ್ಲ. ಆತಂಕಕ್ಕೆ ಕಾರಣ ಅದಲ್ಲ
ಚಲನೆ ಚಾಲನೆ ಲಾಲನೆ ಪಾಲನೆ ಕಡ್ಡಾಯವಲ್ಲ'[36]
(ಈ ಮಾರ್ಗವು ಚಾಲನೆಯಲ್ಲಿಲ್ಲ)

ಹೀಗೆ ಸಂಬಂಧಗಳು ಮುರಿದು ಬಿದ್ದಾಗಲೂ ಆತಂಕ ಅಥವಾ ನೋವಿನ ಛಾಯೆ ಕಾಣುವುದಿಲ್ಲ. ಬದಲಿಗೆ ಹಿಂದಿನ ನೆನಪುಗಳೇ ಮುಂದಿನ ಬದುಕಿಗೆ ಸಾಕು ಎಂಬ ಆಶಾವಾದ ಇಲ್ಲಿ ಕಾಣುತ್ತದೆ. ಸಂಬಂಧಗಳನ್ನು ಹೀಗೇ ಮುಂದುವರೆಸುವುದರ ಬಗೆಗೆ ಯಾವುದೇ ಕರಾರು ಆಗಿರುವುದಿಲ್ಲ ಎಂಬುದನ್ನು ಇದು ಸೂಚಿಸುತ್ತದೆ.

ತಾಯಿ, ತಂದೆ, ಮಗಳು ಮತ್ತು ಇತರ ಸಂಬಂಧಗಳಷ್ಟೇ ಅಲ್ಲದೆ ತನ್ನ ಮತ್ತು ಹಿಂದಿನ ತಲೆಮಾರಿನವಳಾದ ಅಜ್ಜಿಯ ನಡುವೆ ಕವಿಗೆ ವಿಶಿಷ್ಟ ಸಂಬಂಧವೇರ್ಪಟ್ಟಿದೆ. ಅಜ್ಜಿಯ ಧೋರಣೆ ಆಧುನಿಕತೆಗೆ ಸ್ಪಂದಿಸುವಂಥದ್ದಾಗಿ ತೋರಿದೆ. 'ಅಜ್ಜಿ' ಕವಿತೆಯಲ್ಲಿ ಕವಿತೆಯ ನಾಯಕಿಯ ಬದುಕಿನ ರೀತಿ ನೀತಿಗಳು ಬದಲಾದರೂ ಗಂಡನ ಧೋರಣೆ ಬದಲಾಗದುದರ ಬಗೆಗೆ ಅಜ್ಜಿಯ ಪ್ರತಿಕ್ರಿಯೆ 'ನಿನ್ನ ಜೀನ್ಸು ಪ್ಯಾಂಟು ಒಯ್ದು ಒಲೆಯೊಳಗಿಕ್ಕು' ಎಂಬುದಾಗಿದೆ. ಆದರೂ ಬೆಳವಣಿಗೆಯ ಬಗೆಗೆ ನಂಬಿಕೆ ಇರಿಸಿಕೊಂಡಿರುವ ಇವಳು ನಿರಾಶಾಭಾವ ಪ್ರಕಟಿಸುವುದಿಲ್ಲ. ಬದಲಾವಣೆಗಳಿಗೆ ಸ್ಪಂದಿಸುತ್ತಾ, ಹೊಂದಿಕೊಳ್ಳುತ್ತಾ ಬೆಳವಣಿಗೆಯ ಹಾದಿಯಲ್ಲಿ ನಡೆಯುತ್ತಿರುವ ನಾಯಕಿ ನಿಂತ ಕಡೆಯೇ ಇರಬೇಕಾದರೂ ನಡೆಯುತ್ತಲೇ ಇರಬೇಕಾದ ವಾಸ್ತವವನ್ನು ಅರಿತಿರುವವಳು. ಅದಕ್ಕೆ

'ತಿಳಿದು ಬೆಚ್ಚಿದೆ ನಾ ನಿಂತಲ್ಲೇ ನಿಂತಿದ್ದೆ
ಹೆಜ್ಜೆ ನೆಲದೊಳಗೆ ಹುದುಗಿ ನಾ ನಿಂತಲ್ಲೇ ನಡೆದಿದೆ'.[37] (ಈತನಕ)

ಎಂದು ಹೇಳಿಕೊಳ್ಳುತ್ತಾಳೆ.

6) **ಸಂಪ್ರದಾಯದ ಚೌಕಟ್ಟನ್ನು ಮುರಿಯುವ ಮನೋಭಾವದ ಚಿತ್ರಣ**

'ಪ್ರತಿಭಾರ ಕವಿತೆಗಳಲ್ಲಿ ಎದ್ದು ಕಾಣುವ ಮತ್ತೊಂದು ಗುಣವೆಂದರೆ ಸಂಪ್ರದಾಯ ಮತ್ತು ಮಹಿಳೆಯ ನಡುವಣ ಸಂಬಂಧ. ಪ್ರತಿಭಾರ ಬಹುತೇಕ ಕವಿತೆಗಳಲ್ಲಿ ಬರುವ ಮಹಿಳೆಯರು ಈ ಬಿಕ್ಕಟ್ಟನ್ನು ಈ ರೀತಿಯ ಸಾಂಪ್ರದಾಯಿಕ ತಿಳುವಳಿಕೆಯನ್ನು ಭಂಜಿಸುತ್ತಾರೆ. 'ಕಾಡುಗೊಲ್ಲ ಮತ್ತು ಬ್ರಾಹ್ಮಣರ ಹುಡುಗಿ', 'ನಾನು ಬ್ರಾಹ್ಮಣ ಕನ್ಯೆ', 'ಕಡೆಗೆ ಕರುಣಾಳು ರಾಘವನಲ್ಲಿ ತಪ್ಪಿಲ್ಲ', ಇವು ಈ ರೀತಿಯ ಪದ್ಯಗಳು.'[38]

'ಕಾಡುಗೊಲ್ಲ ಮತ್ತು ಬ್ರಾಹ್ಮಣರ ಹುಡುಗಿ' ಕವಿತೆಯಲ್ಲಿ ಬ್ರಾಹ್ಮಣರ ಹುಡುಗಿಯೊಬ್ಬಳು ಕಾಡುಗೊಲ್ಲನ ಕೊಳಲ ದನಿಗೆ, ಗೊಮ್ಮಟನ ರೀತಿಯ ಮೈಗೆ ಮನಸೋತಿದ್ದಾಳೆ. ಅವನ ಒದ್ದೆ ಕೂದಲು, ಹೊಳೆಯುವ ಕಣ್ಣು, ದನ ಬೆದರಿಸುವ ಸ್ಟೈಲು, ಅವನ ಮೀನು ಹಿಡಿಯುವ ಸಾಹಸ, ಎಲ್ಲವೂ ಆಕೆಗೆ ಮೆಚ್ಚುಗೆ. ಹೀಗೇ ಕಾಡುಗೊಲ್ಲನ ಸಂಗವ ಮಾಡುವ ಬ್ರಾಹ್ಮಣರ ಹುಡುಗಿಗೆ ಅದು ಹಾದರ ಅನ್ನಿಸುವುದಿಲ್ಲ. ಜಾತಿ ಅಡ್ಡ ಬರುವುದಿಲ್ಲ.

'ರಾಮಾಯಣ ಪಾರಾಯಣದ
ಹದಿನೈದನೆಯ ರಾತ್ರಿ
ಅಗ್ನಿ ಪರೀಕ್ಷೆಯ ಝಳ
ಕಡಿಮೆಯಾಗಲು ಸುರಿದ
ಜಡಿಮಳೆಗವಳು
ಶಾಪ ಕೊಡಲಿಲ್ಲ
ಅವನಿಗೂ ಅದು
ಹಾದರ ಅನ್ನಿಸಲಿಲ್ಲ'[39] (ಕಾಡುಗೊಲ್ಲ ಮತ್ತು ಬ್ರಾಹ್ಮಣರ ಹುಡುಗಿ)

ಆದರೆ ಅಜ್ಜಿಯ ಎಚ್ಚರಿಕೆಯ ಮಾತುಗಳು ಹುಡುಗಿಯನ್ನು ಎಚ್ಚರಿಸುತ್ತವೆ. 'ನಾನು ಬ್ರಾಹ್ಮಣ ಕನ್ಯೆ' ಎಂಬ ಪದ್ಯದಲ್ಲೂ ಈ ಬಗೆಯ ಜಾತಿಯ ಭ್ರಮೆಯನ್ನು ಕಳೆದುಕೊಂಡ ಪಾತ್ರವನ್ನು ಕಾಣಬಹುದು.

'ನೀನು ಶಿವಶರಣ ಸದ್ಗುಣ
ನಾನು ಬ್ರಾಹ್ಮಣ ಕನ್ಯೆ
ಭಕ್ತ ನೀನು
ಭವಿ ನಾನು

ಬೇಡವೆಂದರೂ ಕೊರೆಯುತ್ತಿದೆ ಹುಳ
ಕದಲಿಸಲಿ ಹೇಗೆ
ನನ್ನ ತೊಡೆ ಮೇಲೆ
ನಿನ್ನ ತಲೆ ವಿರಮಿಸಿದೆ
ಕಣ್ಣು ಬಿಟ್ಟಾಗ ನೀನು ಶಪಿಸುವೆ
ನಿನಗೆ ನಿನ್ನ ವ್ರತವೇ ಪ್ರಧಾನ
ಶಪಿತೆ ನಾನು
ಯುಕ್ತ ಕಾಲಕ್ಕೆ ಎಲ್ಲ ಮರೆವೆ
ನನಗೆ ನನ್ನ ಭ್ರಮೆಯೂ ಗೌಣ.[40] (ನಾನು ಬ್ರಾಹ್ಮಣ ಕನ್ಯೆ)

'ಛಲ' ಮತ್ತೊಂದು ಬಗೆಯಲ್ಲಿ ಹೆಣ್ಣು ತನ್ನ ನಿರ್ಧಾರಕ್ಕೆ ಅನುಗುಣವಾಗಿ ಜೀವನಶೈಲಿಯನ್ನು ರೂಪಿಸಿಕೊಳ್ಳಲು ಬಯಸುವುದರ ಪ್ರತೀಕವಾಗಿ ಬಂದಿದೆ. ಇದುವರೆವಿಗೂ ಆಕೆಯ ಲೋಕ ಬಹಳ ಸೀಮಿತವಾದುದಾಗಿತ್ತು. ಇದನ್ನು ದಾಟುವ ಸಾಹಸವನ್ನು ಛಲದಿಂದ ಕೈಗೊಳ್ಳುತ್ತಾಳೆ.

'ನೂರು ನೆಲ ನೋಡುವ
ಹಂಬಲ
ಹಿತ್ತಲು, ಅಂಗಳ, ಜಗಲಿಗೆ
ಮೀಸಲು
ಸೀರೆಯ ಅಂಚು, ಸೆರಗು
ಕೂಡ ಬದಲಾಗುವುದಿಲ್ಲ
ಕುಂಕುಮದ ಗಾತ್ರ
ಏರಿಳಿಯುವುದಿಲ್ಲ
ಮುಕ್ಕಾಲು ಸೌಟು ಎಣ್ಣೆಯ
ಒಗ್ಗರಣೆ
ತಿಂಗಳಿಗೆ ಹದಿನೆಂಟೇ
ಕಾಯಿ.'[41] (ಛಲ)

ಹೀಗೇ ಸಾಗುತ್ತಿದ್ದ ಬದುಕಿಗೆ ಆಧುನಿಕತೆ ಹೊಸ ತಿರುವನ್ನು ನೀಡಿದೆ. ಎಲ್ಲ ತರಹದ ಸಿದ್ಧ ಪದಾರ್ಥಗಳೂ ಬೇಕೆಂದಾಗ ಸಿಗುವ ಅವಕಾಶವನ್ನು ಗೃಹಿಣಿಗೆ ಇದು ತಂದುಕೊಟ್ಟಿದೆ. ಹೀಗಿರುವಾಗ ಕಷ್ಟಪಟ್ಟು ಅಡುಗೆ ಮಾಡುವ ಗೋಜನ್ನು

ದೂರ ಮಾಡಿಕೊಳ್ಳುತ್ತಾಳೆ. ಈಗ ಅವಳು ಪ್ರಪಂಚಕ್ಕೆ ಸಂಪೂರ್ಣ ತೆರೆದುಕೊಳ್ಳಲು ಬಯಸಿ ಹೇಳುತ್ತಾಳೆ,

'ಸತ್ತರೂ ನನ್ನ ನವರಂಧ್ರಗಳಲ್ಲಿ
ಹತ್ತಿ ತೂರಿಸಬೇಡಿ
ತೆರೆದುಕೊಂಡಿರಲಿ ಅವು ಎಲ್ಲ
ವಾಸನೆಗೆ, ರುಚಿಗೆ, ಸ್ಪರ್ಶಕ್ಕೆ,
ನೋಟಕ್ಕೆ'.[42]

ಇಷ್ಟು ವರ್ಷಗಳು ತಡೆತಡೆದು ಬಾಳುವೆ ನಡೆಸಿದ್ದ ಈಕೆ ಎಲ್ಲ ಅನುಭವಗಳಿಗೆ ಮುಕ್ತವಾಗಿ ತೆರೆದುಕೊಳ್ಳುವ ನಿರ್ಧಾರ ಮಾಡಿದ್ದಾಳೆ. ಈ ನಿರ್ಧಾರಕ್ಕೆ ಪ್ರತಿರೋಧ ವ್ಯಕ್ತಪಡಿಸುವ 'ಅವನಿಂದ':

'ಒಂದು ದಿನ ಬೆಳ್ಳಂಬೆಳಗ್ಗೆ
ಒಬ್ಬಟ್ಟು ಮಾಡಲು ಬೇಡಿಕೆ
ನಾನು ಮಾತ್ರ ಏನು
ಮಾಡಿದರೂ ಒಬ್ಬಟ್ಟು ತಟ್ಟುವುದಿಲ್ಲ.
ಎಂದು ಶಪಥ ತೊಟ್ಟಿದ್ದೇನೆ'.[43]

ಅಡುಗೆಯ ವಿಷಯದಲ್ಲಿ ಆರಂಭವಾಗುವ ಅವಳ ನಿರ್ಧಾರದ ಗಟ್ಟಿತನ ಅವಳ ವ್ಯಕ್ತಿತ್ವವು ಗಟ್ಟಿತನವನ್ನು ಪಡೆಯುತ್ತಿರುವ ಸೂಚನೆಯನ್ನು ನೀಡುತ್ತದೆ.

7) **ಸಂಸ್ಕೃತಿಯೊಳಗಿನ ಅಂತರ್‌ವಿರೋಧಗಳನ್ನು ಮುಖಾಮುಖಿಯಾಗುವ ಸಂದರ್ಭಗಳು :**

'ಪ್ರತಿಭಾ ಅವರ ಬಹುತೇಕ ಕವಿತೆಗಳು ಚರಿತ್ರೆಯ ಮೂಸೆಯಲ್ಲಿ ಮಿಂದು ಬಂದವುಗಳು ಮತ್ತು ವೈಯಕ್ತಿಕ ಅನುಭವ ಲೋಕವೊಂದು ಇಲ್ಲಿ ಚಾರಿತ್ರಿಕ ನಿರೂಪಣೆಗಳ ಮತ್ತು ಕಟ್ಟಲಾಗಿರುವ ಸಂಸ್ಕೃತಿಗಳ ವಿರುದ್ಧವಾಗಿ ಬಂದಿರುವ ಸಂಗತಿಗಳಾಗಿವೆ.'[44] ಪಾತಿವ್ರತ್ಯದಂತಹ ಮೌಲ್ಯಗಳನ್ನು ಹೇಳುವ ಈ ಸಂಸ್ಕೃತಿಯು ಹೆಣ್ಣನ್ನು ಹೆದರಿಸಲು ಬಳಸುವ ಪುರಾಣದ ಕಥೆಗಳನ್ನು ಉಲ್ಲೇಖಿಸಿ, ಸಂಸ್ಕೃತಿಯಲ್ಲಿ ಪುರುಷರೇ ಪ್ರಧಾನಪಾತ್ರ ವಹಿಸುತ್ತಿರುವುದರಿಂದ ತಮ್ಮಲ್ಲಿರುವ ದೌರ್ಬಲ್ಯಗಳನ್ನು ಮುಚ್ಚಿಕೊಳ್ಳಲು ಹೇರಿದ ನಿಯಮಗಳೆಂಬುದನ್ನು ಬಯಲಿಗೆಳೆಯುತ್ತಾರೆ.

'ಸಾವ ಕೆಡುವ ಗಂಡರ ಕಾಟವಲ್ಲ
ಹೊರಗಣ ಸಿಪ್ಪೆ ಒಪ್ಪಗೆಡದೆ
ಒಳಗೂ ತಿರುಳು ಹಣ್ಣಾದ ಹೂರಣವಲ್ಲ
ಹೆದರಿಸುತ್ತಾರೆ ಅವರು ಕತೆಗಳನ್ನು ಹೇಳಿ
ಬೆದರಿಸುತ್ತಾರೆ ನೂರೆಂಟು ಶಾಪಗಳ ಅಪಾಯ ತೋರಿ
ಕಲ್ಲಾಗುವ ಕಷ್ಟಗಳ ಬೆಟ್ಟದಡಿ ಹುಲ್ಲಾಗುವ
ಮಗನ ಖಡ್ಗಕ್ಕೆ ಬಲಿಯಾಗುವ ಉರಿ ಉರಿಯುವ
ಬೆಂಕಿ ಕೊಂಡ ಹಾಯುವ ಹುಳ ಹಿಡಿದು ಸಾಯುವ
ಎಷ್ಟೊಂದು ವಿಧದ ನರಕ ಪಾತಕಿಗೆ
ಪರಪುರುಷನ ಬಯಸಿದ್ದಕ್ಕೆ'[45] (ಪತಿವ್ರತೆ ಅಲ್ಲ)

'ಪತಿವ್ರತೆ' ಎಂದರೆ ಅದೊಂದು ದೊಡ್ಡ ಮೌಲ್ಯವೆಂದು ಅದನ್ನು ಪಾಲಿಸಿದವರ ಹಲವು ಕತೆಗಳನ್ನು ಅವರು ಸೃಷ್ಟಿಸಿ ಹೇಳುತ್ತಾರೆ.

'ಇದನ್ನೆಲ್ಲ ಕೇಳಿ ಕೇಳಿ ಸಾಕಾಗಿ, ಕಾಮುಕರನ್ನು ಆಹ್ವಾನಿಸಿದಾಗ,
ಶಪಿಸಿ ಸುಸ್ತಾದರು ದೇವರುಗಳು
ಕಲ್ಲಾಗಲಿಲ್ಲ ಕರಗಲಿಲ್ಲ
ಪುಳಕದಲ್ಲಿ ತನು ಮನ ಅರಳಿ
ಇನ್ನಷ್ಟು ಹೊಮ್ಮಿದೆ
ಇನ್ನು ಸಾವಿನ ಮಾತು
ಈಗೇಕೆ
ಬರಲಿ ಬಂದಾಗ ನೋಡೋಣ'[46]



ಎಂದು ಸವಾಲಾಗಿ ನಿಲ್ಲುವ ಕವಿತೆಯ ನಾಯಕಿ ಈ ಮೌಲ್ಯದ ಹಿಂದಿನ ಸಂಚನ್ನು ಬಯಲು ಮಾಡುತ್ತಾಳೆ.

'ಬಳೆಗಳ ಸೇಲ್ಸ್‌ಮನ್' ಕವಿತೆ ಜನಪದ ಗೀತೆಯೊಂದರ ಅನುಕರಣೆಯಂತೆ ಕಂಡು ಬರುತ್ತಿದ್ದರೂ ಆಧುನಿಕ ನಗರ ಜೀವನದಲ್ಲಿ ಹೆಣ್ಣು ಮತ್ತು ತವರಿನ ಸಂಬಂಧದ ಸ್ವರೂಪ ಬದಲಾಗಿರುವುದನ್ನು ಒಡೆದು ತೋರುತ್ತದೆ. ಅಪ್ಪ, ಅಣ್ಣಂದಿರ ಆಸರೆಯಲ್ಲೇ ಅವರ ಪ್ರೀತಿಗಾಗಿಯೇ ಹಾತೊರೆಯುತ್ತಿದ್ದ ಹೆಣ್ಣು ಈಗ ಅವರನ್ನು ಭೇಟಿ ಮಾಡುವುದು ಅಪರೂಪವಲ್ಲ. ಗಂಡನ ಮನೆಯಲ್ಲಿ ತನ್ನ ನೆಲೆಯನ್ನು ಭದ್ರಪಡಿಸಿಕೊಂಡು ಬಾಳುವ ಚಾತುರ್ಯ ಇಂದಿನ ಹೆಣ್ಣಿಗೆ ಇದೆ ಎಂಬುದನ್ನು ಈ ಕವಿತೆ ವಿವರಿಸುತ್ತದೆ. ಹಳೆಯ

ಚುಚ್ಚುಮಾತುಗಳಿಗೆ ಇವಳು ಉತ್ತರ ಕೊಡುವುದು ಹೀಗೆ:

'ಮತ್ತೆ ಅದೇ ಹಳೆಯ ಕಣಿ ಹೇಳಬೇಡ
ಬಾಲಕರಿಲ್ಲದ ಬಾಲೆ ಆಯ್ಕೆ ಹೊರತು ಅನಿವಾರ್ಯವಲ್ಲ
ಹಾಸ್ಯುಂಡು ಬೀಸಿ ಒಗೆದ ಬಾಳು ನನ್ನದಲ್ಲ ನಿನ್ನದು
ಗಾಣಕ್ಕೆ ಕಟ್ಟಿದ ಬಾಡಿಗೆ ಎತ್ತು ನಾನಂತೂ ಆಗುವುದಿಲ್ಲ'[47]

(ಬಳೆಗಳ ಸೇಲ್ಸ್‌ಮನ್)

ಮಕ್ಕಳಿಲ್ಲದ ಹೆಣ್ಣುಮಕ್ಕಳನ್ನು ಉಂಡು ಎಸೆದ ಎಲೆಗೆ ಹೋಲಿಸುವುದನ್ನು ವಿರೋಧಿಸುವ ಇವರು, ಅದೂ ಆಯ್ಕೆ ಮಾಡಿಕೊಂಡ ಬದುಕಿನ ರೀತಿಯಾಗಿರಲು ಸಾಧ್ಯ ಎಂದು ಸ್ಪಷ್ಟಪಡಿಸುತ್ತಾರೆ. ಆಗ ಹಾಸ್ಯುಂಡು ಬೀಸಿ ಒಗೆದ ಬಾಳು ನನ್ನದಲ್ಲ ನಿನ್ನದು ಎಂದು ಎಚ್ಚರಿಸುತ್ತಾರೆ. ಹೀಗೆ ಹಲವಾರು ಬದಲಾವಣೆಗಳೊಂದಿಗೆ ಬದುಕುತ್ತಿರುವ ಇಂದಿನ ಹೆಣ್ಣುಮಗಳು ಬಳೆಗಳ ಸೇಲ್ಸ್‌ಮನ್ ಅವಳ ತಾಯಿಯ ಮನೆಗೆ ಬರುತ್ತಿರುವುದರ ಬಗೆಗೆ ಎಚ್ಚರದಿಂದಿರಬೇಕು ಎಂಬ ಮಾತನ್ನು ಹೇಳುತ್ತಾಳೆ. ಇಂದಿನ ಬದುಕಿನಲ್ಲಿ ಇಂತಹ ಅಪರಿಚಿತರ ಆತಂಕವಿರುವುದನ್ನು ಈ ಕವಿತೆ ಸೂಚಿಸುತ್ತದೆ.

'ಕೆಂಪು' ಕವಿತೆ ಕನ್ನಡ ನವೋದಯ ಕಾಲದಲ್ಲಿ ಪ್ರಕೃತಿಯನ್ನೇ ಕೇಂದ್ರವಾಗಿರಿಸಿಕೊಂಡು ಕವಿಯೊಬ್ಬರು ಬರೆದ 'ಹಸಿರು' ಕವಿತೆಗೆ ಪ್ರತಿಕ್ರಿಯೆಯಾಗಿ ಬಂದಿದೆ. ತನ್ನ ಕವಿತೆಗಳ ಒತ್ತು ಇರುವುದು ಎಲ್ಲಿ ಎಂಬುದನ್ನು ಕವಿ ಸ್ಪಷ್ಟಪಡಿಸುತ್ತಾ ಈ ಹಳೆಯ ಮಾದರಿಯ ನಿರಾಕರಣೆಯನ್ನು ಮಾಡುತ್ತಿದ್ದಾರೆನಿಸುತ್ತದೆ.

'ಹಸಿರಿನಾ ಮಲೆ ಹಸಿರು ಕಣಿವೆ
ಹಸಿರು ಗದ್ದೆಯಾ ಬಯಲು'
ಗೊತ್ತು ಬಿಡಿ ಅದರಿಂದೇನು
ನನಗೆ ಕೆಂಪಿನ ಹುಚ್ಚು'[48] (ಕೆಂಪು)

ಎಂದು ತಮ್ಮ ಹಂಬಲಗಳನ್ನು ತೆರೆದಿಡಲು ಕೆಂಪನ್ನು ಸೂಚಕವಾಗಿ ಬಳಸುತ್ತಿರುವುದನ್ನು ಕಾಣಬಹುದು.

'ಕೆಂಪಲ್ಲ ಇದು ಬಲಿ ಕೇಳದ ನೆಲದ
ಹೊರ ಚಿಮ್ಮದ ಗಾಯ, ಮರೆತ ಕನಸುಗಳ
ಭಟ್ಟಿಯಲ್ಲಿ ಇಳಿಸಿದ ಬಣ್ಣವಿಲ್ಲದ ನೀರು

ಶಾಸ್ತ್ರೋಕ್ತ ತಪ್ಪುಗಳಿಗೂ ಮಾಡಿದ ಸೀಮಂತದ
ಹಸಿರು ಸೀರೆ ಬಳೆ ಉಡಿ ತುಂಬಿದ ವೀಳ್ಯ ಮರೆಸಿಟ್ಟ
ಉಗ್ರ ಕೋಪದ ಕೆಂಪು ನೆರಳು'[49]

ಎಂದು ಪ್ರತಿಭಟನೆಯ ಅಭಿವ್ಯಕ್ತಿಗಾಗಿ ಬಳಸುವ ಬಣ್ಣ ಕೆಂಪು. ಅದು,

'ಲೋಕಾರೂಢಿಯ ಸುಣ್ಣ ಬಳಿದ ಕೋಣೆಯ
ಒಳಪದರದ ಹಂಬಲದ ಕೆಂಪು'[50]

ಎಂದು ಅದರ ಸ್ವರೂಪವನ್ನು ವಿವರಿಸುತ್ತಾರೆ. ಈ ಹಿನ್ನೆಲೆಯಲ್ಲಿ ಹಳೆಯ ಕವಿತೆಗಳ ಆಶಯದ ಬಗೆಗೆ ಅವರ ನಿರಾಕರಣೆಯ ನೆಲೆಯು 'ಈ ಮಾರ್ಗವು ಚಾಲನೆಯಲ್ಲಿಲ್ಲ', 'ಪತಿವ್ರತೆ ಅಲ್ಲ' ಮುಂತಾದ ಕವಿತೆಗಳಲ್ಲಿ ಕಂಡುಬರುತ್ತದೆ.

ತನ್ನ ಸುತ್ತಣ ಜಗತ್ತನ್ನು ಹೆಣ್ಣಿನ ಮನೋಲೋಕ ಹಾಗೂ ದೇಹಲೋಕದ ನೆಲೆಯಿಂದಲೇ ಅರ್ಥ ಮಾಡಿಕೊಳ್ಳಲೆತ್ನಿಸುವ ಕವಿ ಅಲ್ಲಿ ಕಾಣುವ ಬಗೆ ಬಗೆಯ ಅನುಭವಗಳ ಜಗತ್ತನ್ನು ಹೀಗೆ ಓದುಗರ ಮುಂದಿರಿಸಿದ್ದಾರೆ ಎನ್ನಬಹುದು.

**ಅಡಿಟಿಪ್ಪಣಿ:**

1. ಡಾ. ಕೇಶವ ಶರ್ಮ .ಕೆ 'ಬೇರೊಂದು ಕೋನದಲ್ಲಿ ಚರಿತ್ರೆ', ಮಯೂರ, ಸಂಚಿಕೆ: ಡಿಸೆಂಬರ್ 06, ಪುಟ 48.
2. ಎಂ.ಎಸ್. ಆಶಾದೇವಿ, 'ತಾತ್ವಿಕ ನೆಲೆಯ ಹುಡುಕಾಟದಲ್ಲಿ', ಸಂಚಯ, ಸಂಪುಟ 15, ಸಂಚಿಕೆ 3(72), ನವೆಂಬರ್ 2006, ಬೆಂಗಳೂರು, ಪುಟ : 47.
3. ಡಾ. ಕೇಶವಶರ್ಮ .ಕೆ. 'ಬೇರೊಂದು ಕೋನದಲ್ಲಿ ಚರಿತ್ರೆ', ಮಯೂರ ಮಾಸಪತ್ರಿಕೆ, ಸಂಚಿಕೆ: ಡಿಸೆಂಬರ್ 06, ಪುಟ 47.
4. ಅದೇ.
5. ಎಚ್.ಎಸ್. ರಾಘವೇಂದ್ರರಾವ್, 'ಮುನ್ನುಡಿ ಬೆನ್ನುಡಿಗಳ ನಡುವೆ' (ಮುನ್ನುಡಿ), ಮಹಿಳಾ ಸಾಹಿತ್ಯಿಕ, ನವನಗರ, ಹುಬ್ಬಳ್ಳಿ 2006.
6. ಡಾ. ಕೇಶವ ಶರ್ಮ .ಕೆ, ಪೂರ್ವೋಕ್ತ, ಪುಟ 45.
7. ಪ್ರತಿಭಾ ನಂದಕುಮಾರ್, ಮುನ್ನುಡಿ ಬೆನ್ನುಡಿಗಳ ನಡುವೆ ಸಮಗ್ರ ಕವನ ಸಂಕಲನ, ಮಹಿಳಾ ಸಾಹಿತ್ಯಿಕ, ನವನಗರ, ಹುಬ್ಬಳ್ಳಿ 2006, ಪುಟ 3.
8. ಅದೇ. ಪುಟ 9
9. ಅದೇ. ಪುಟ 13
10. ಅದೇ. ಪುಟ 336
11. ಅದೇ. ಪುಟ 63
12. ಅದೇ. ಪುಟ 347
13. ಅದೇ. ಪುಟ 411
14. ಅದೇ.
15. ಅದೇ.
16. ಅದೇ. ಪುಟ 383
17. ಅದೇ.
18. ಅದೇ. ಪುಟ 384
19. ಅದೇ. ಪುಟ 171
20. ಡಾ. ಕೇಶವಶರ್ಮ .ಕೆ, ಪೂರ್ವೋಕ್ತ, ಪುಟ 45.
21. ಪ್ರತಿಭಾ ನಂದಕುಮಾರ್, ಪೂರ್ವೋಕ್ತ, 'ಕೇರ್ ಫ್ರೀ ಮಹಿಳೆಯರು', ಪುಟ 186.
22. ಅದೇ.

23. ಅದೇ. 'ಆಹಾ, ಪುರುಷಾಕಾರಂ!', ಪುಟ 361.
24. ಅದೇ.
25. ಅದೇ. ಪುಟ 453
26. ಅದೇ. ಪುಟ 431
27. ಅದೇ. ಪುಟ 70
28. ಅದೇ. ಪುಟ 342
29. ಅದೇ.
30. ಅದೇ. ಪುಟ 73
31. ಎಚ್.ಎಸ್. ರಾಘವೇಂದ್ರರಾವ್, ಪೂರ್ವೋಕ್ತ, ಪುಟ 22.
32. ಪ್ರತಿಭಾ ನಂದಕುಮಾರ್, ಪೂರ್ವೋಕ್ತ, ಪುಟ 299.
33. ಅದೇ.
34. ಅದೇ. ಪುಟ 121
35. ಎಚ್.ಎಸ್. ರಾಘವೇಂದ್ರರಾವ್, ಪೂರ್ವೋಕ್ತ, ಪುಟ 22.
36. ಪ್ರತಿಭಾ ನಂದಕುಮಾರ್, ಪೂರ್ವೋಕ್ತ, ಪುಟ 436.
37. ಅದೇ. ಪುಟ 82
38. ಡಾ. ಕೇಶವಶರ್ಮ .ಕೆ, ಪೂರ್ವೋಕ್ತ, ಪುಟ 47.
39. ಪ್ರತಿಭಾ ನಂದಕುಮಾರ್, ಪೂರ್ವೋಕ್ತ, ಪುಟ 327.
40. ಅದೇ. ಪುಟ 389
41. ಅದೇ. ಪುಟ 340
42. ಅದೇ.
43. ಅದೇ.
44. ಡಾ. ಕೇಶವಶರ್ಮ .ಕೆ. ಪೂರ್ವೋಕ್ತ, ಪುಟ 46.
45. ಪ್ರತಿಭಾ ನಂದಕುಮಾರ್, ಪೂರ್ವೋಕ್ತ, ಪುಟ 429.
46. ಅದೇ.
47. ಅದೇ. ಪುಟ 442
48. ಅದೇ. ಪುಟ 236

# ಅಧ್ಯಾಯ-4

# ಸ್ತ್ರೀವಾದದ ಹಿನ್ನೆಲೆಯಲ್ಲಿ ಪ್ರತಿಭಾ ನಂದಕುಮಾರ್‌ರವರ ಕಾವ್ಯ

ಸ್ತ್ರೀವಾದವು ಹೆಣ್ಣನ್ನು ಪುರುಷ ಪ್ರಧಾನ ಜಗತ್ತು ಅಧೀನ ದರ್ಜೆಯವಳನ್ನಾಗಿಸಿರುವುದನ್ನು ಪ್ರಶ್ನಿಸಿ, ಸರಿಯಾದ ಸ್ಥಾನಮಾನಗಳಿಗೆ ಒತ್ತಾಯಿಸಲು ಹುಟ್ಟಿಕೊಂಡ ಚಿಂತನಾಕ್ರಮವೆನ್ನಬಹುದು. ಲಿಂಗ ವ್ಯತ್ಯಾಸವೊಂದೇ, ಪುರುಷ ಹೆಣ್ಣನ್ನು ಅಂಕೆಯಲ್ಲಿರಿಸಿಕೊಳ್ಳಲು ಕಾರಣವಾಯಿತು ಎಂಬುದು ಸತ್ಯವೇ ಆದರೂ ಅವಳೂ ಕೂಡ ಮಾನವ ಇತಿಹಾಸದ ನಿರ್ಮಾಣದಲ್ಲಿ ಬಹುದೊಡ್ಡ ಕೊಡುಗೆಯನ್ನೇ ನೀಡಿದ್ದಾಳೆ ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಇದನ್ನು ಮರೆ ಮಾಚಲು ಯತ್ನಿಸಿದ ಎಲ್ಲ ಸಂಗತಿಗಳೂ ಈಗ ಬಯಲಾಗಿವೆ. ಎಲ್ಲ ಜ್ಞಾನಶಿಸ್ತುಗಳನ್ನು (ತತ್ತ್ವಶಾಸ್ತ್ರ, ರಾಜಕೀಯ, ಅರ್ಥಶಾಸ್ತ್ರ, ಮಾನವಶಾಸ್ತ್ರ ಇತ್ಯಾದಿ) ಅಧ್ಯಯನ ಮಾಡಿದಾಗ ಹೆಣ್ಣಿನ ಧ್ವನಿ ಅಲ್ಲೆಲ್ಲ ಗೈರುಹಾಜರಾಗಿರುವ ಸಂಗತಿಯನ್ನು ಅದಕ್ಕೆ ಕಾರಣವಾದ ಸಂಗತಿಗಳನ್ನೂ ಗುರುತಿಸಲಾಗಿದೆ.

ಹೆಣ್ಣಿನ ಬದುಕಿನ ಮೂಲೆ ಮೂಲೆಯನ್ನೂ ವ್ಯಾಪಿಸಿರುವ ಪುರುಷನ ವಿಚಾರಧಾರೆಗಿಂತ ಭಿನ್ನವಾದ ಆಲೋಚನಾ ಕ್ರಮವೊಂದು ಇರಲು ಸಾಧ್ಯ ಎಂದು ಸ್ತ್ರೀವಾದ ನಂಬುತ್ತದೆ. ಪುರುಷ ಚಿಂತನೆ ಈಗಾಗಲೇ ಚಿಂತಿಸಿರುವ ವಿಚಾರಗಳ ಮರು ಅಧ್ಯಯನವಿರಬಹುದು ಅಥವಾ ತನ್ನವೇ ಸ್ವತಂತ್ರ ನೆಲೆಯ ವಿಚಾರಗಳಿರಬಹುದು ಭಿನ್ನ ಆಲೋಚನಾ ಕ್ರಮವನ್ನು ಪ್ರತಿನಿಧಿಸುತ್ತವೆ. ಹೀಗೆ ಸಾಮಾಜಿಕ ಚಳುವಳಿಯೊಂದು ದೊಡ್ಡ ಪ್ರಮಾಣದಲ್ಲಿ ಇತರ ಚಿಂತನಾಕ್ರಮಗಳನ್ನು ಪ್ರಭಾವಿಸಿ ತನ್ನ ಚಿಂತನಾಕ್ರಮವನ್ನು ಸೃಷ್ಟಿಸಿಕೊಳ್ಳಲು ಹೊರಟಿದ್ದು ಈಗ ಇತಿಹಾಸವಾಗಿದೆ.

'ಸ್ತ್ರೀವಾದಿ ಚಿಂತನೆಗಳ ಇವತ್ತಿನ ಪ್ರಧಾನ ಕಾಳಜಿ ಮತ್ತು ಪ್ರಯತ್ನಗಳು ಮುಖ್ಯವಾಗಿ ಎರಡು ನೆಲೆಗಳಲ್ಲಿ ನಡೆಯುತ್ತಿದೆ. ಮೊದಲನೆಯದು ಮೂಲ ಸ್ತ್ರೀವಾದದ (ನೇಟಿವ್ ಫೆಮಿನಿಸಮ್) ಹುಡುಕಾಟ ಇದನ್ನು ಆದಿಮ ಸ್ತ್ರೀವಾದದ ಹುಡುಕಾಟ ಎಂದು ಕರೆಯಬಹುದು. ಸ್ತ್ರೀವಾದದ ಮೂಲನೆಲೆಗಳನ್ನು ಕಟ್ಟಿಕೊಳ್ಳುವುದು ಇಂಥ ಮೂಲನೆಲೆಗಳನ್ನು ಗುರುತಿಸುವುದರ ಮೂಲಕವೇ ಸ್ತ್ರೀವಾದಿ ಹೋರಾಟ ಅನ್ನುವುದು ಅನಾದಿ ಮತ್ತು ಆದಿಮ ಅನ್ನುವುದನ್ನು ಸ್ಪಷ್ಟಪಡಿಸುತ್ತದೆ. 'ಸ್ವ ಪ್ರಜ್ಞೆ'ಯ ಹೆಣ್ಣು ಎಂದಿನಿಂದಲೂ ಇದ್ದಾಳೆ ಎನ್ನುವುದನ್ನು ಅವರ ಹೋರಾಟಗಳು ತಮ್ಮದೇ ಆದ ಮೂರ್ತ-ಅಮೂರ್ತ ರೂಪಗಳಲ್ಲಿ, ಸಣ್ಣ ಗೆಲುವಿನಲ್ಲಿ ಮತ್ತು ದೊಡ್ಡ ಸೋಲಿನಲ್ಲಿ

ಕಾಣಿಸಿಕೊಂಡಿದ್ದೇನಿದೆ ಅವುಗಳನ್ನು ಗುರುತಿಸಿಕೊಳ್ಳುವ ಪ್ರಯತ್ನ. ಈ ಪ್ರಯತ್ನ ಹಿಂದಿನ ಸ್ತ್ರೀವಾದಿ ಹೋರಾಟದಲ್ಲಿ ಇರಲಿಲ್ಲ ಎಂದಲ್ಲ. ಆದರೆ ಈಗ ಅದು ಪಡೆದುಕೊಂಡಷ್ಟು ಚಾಲ್ತಿಯನ್ನು ವೇಗವನ್ನು ಅದು ಪಡೆದುಕೊಂಡಿರಲಿಲ್ಲ. ಇಂದಿನ ಸ್ತ್ರೀವಾದಿ ಹೋರಾಟದ ಇನ್ನೊಂದು ನೆಲೆಯೆಂದರೆ, ಪ್ರತಿಯೊಂದು ಸಮುದಾಯವೂ ತನಗೆ ವಿಶಿಷ್ಟವಾದ ತನ್ನ ಕಾಲ, ಪರಿಸರಕ್ಕೆ ಅಗತ್ಯವಾದ ಹೋರಾಟದ ದಾರಿಗಳನ್ನು ಕಂಡುಕೊಳ್ಳಬಹುದು ಎನ್ನುವುದು. ಸ್ತ್ರೀವಾದಿ ಹೋರಾಟಕ್ಕೆ ಸಾರ್ವತ್ರಿಕವಾದ ನಿರ್ದಿಷ್ಟ ಮಾದರಿಗಳು ಇರುವುದಕ್ಕೆ ಸಾಧ್ಯವಿಲ್ಲ ಎನ್ನುವ ಹೊಸ ನಂಬಿಕೆಯಿಂದ ಹೊರಟ ಚಿಂತನೆ ಇದು'.[1]

ಕನ್ನಡದ ಮೌಖಿಕ ಪರಂಪರೆ ಹಾಗೂ ಮಹಿಳೆಯರ ಬರವಣಿಗೆಗಳನ್ನು ಗಮನಿಸಿದಾಗ ಮಹಿಳೆಯರ ಹೋರಾಟ ಎಂಬುದು ಅನಾದಿ ಕಾಲದ್ದೇ ಹಾಗೂ ಸ್ವಂತದ ನೆಲೆಯದು ಎಂಬುದು ಸ್ಪಷ್ಟವಾಗುತ್ತದೆ. ಆದರೆ ಈಗ ಆ ಆಲೋಚನಾ ವಿಧಾನಕ್ಕೆ ಒಂದು ವೇಗ ಸಿಕ್ಕಿದೆ. ಇದನ್ನು ಸಾಮಾಜಿಕ, ಆರ್ಥಿಕ, ಐತಿಹಾಸಿಕ ಬದಲಾವಣೆಗಳ ಪರಿಣಾಮವೆಂದೂ ಗುರುತಿಸಬಹುದು.

ಬದಲಾವಣೆಗಳಾದಾಗಲೂ ಬದಲಾಗುತ್ತಿರುವ ಬದುಕಿನ ಬಿಕ್ಕಟ್ಟಿನ ಬಗೆಗಳೂ ಬದಲಾಗುತ್ತಿರುತ್ತವೆ. ಇಂತಹ ಬಿಕ್ಕಟ್ಟುಗಳನ್ನು ಎದುರಿಸಲು ತೋರುವ ಪ್ರತಿರೋಧ ಹಾಗೂ ಪರಿಹಾರದ ಹಾದಿಯನ್ನು ಕುರಿತ ಚಿಂತನೆ ಕೂಡ ತೀವ್ರ ಸ್ವರೂಪದ್ದಾಗಿರಬೇಕಾಗುತ್ತದೆ. ಹೆಣ್ಣು ತನ್ನತನವನ್ನು ಉಳಿಸಿಕೊಂಡು ಬದುಕನ್ನು ನಡೆಸುವ ಕಾಲ ಬರಬೇಕಾದರೆ ಅವಳು ನಡೆಯಬೇಕಾದ ದಾರಿಯೂ ದೂರದ್ದೇ ಆಗಿದೆ. ಪುರಷನನ್ನು ತನ್ನ ಪ್ರತಿಸ್ಪರ್ಧಿ ಎಂದೋ ಶತ್ರುಪಕ್ಷದವನೆಂದೋ ದೂರಿ ಅವನನ್ನು ಗೆದ್ದುಬಿಡುವುದು ಸುಲಭ. ಆದರೆ, ಪರಸ್ಪರರ ಅನಿವಾರ್ಯತೆಯ ಅರಿವು ಹಾಗೂ ಮಾನವೀಯ ನೆಲೆ ಕೂಡ ಸ್ತ್ರೀವಾದದ ತಾತ್ವಿಕತೆಗೆ ಇದೆಯಾದ್ದರಿಂದ ಇದು ಸಂಕೀರ್ಣವಾದ ಸವಾಲುಗಳನ್ನು ಮುಂದಿಡುತ್ತದೆ.

ಸಿಮೋನ್ ದ ಬುವಾ ಹೇಳುವಂತೆ 'ಜಗತ್ತನ್ನು ಗಂಡು ತನಗೆ ಬೇಕಾದಂತೆ ಸೃಷ್ಟಿಸಿದ್ದಾನೆ. ಅವನ ದೃಷ್ಟಿಕೋನಕ್ಕೆ ಅನುಗುಣವಾಗಿ ಜಗತ್ತಿನ ನಿಯಂತ್ರಣವನ್ನು ಮಾಡುತ್ತಾನೆ'.[2] ಈ ಹೇಳಿಕೆಯ ಹಿನ್ನೆಲೆಯಲ್ಲಿ ಎಲ್ಲವನ್ನೂ ನಿರ್ಧರಿಸಿ ಹೋರಾಟಕ್ಕೆ ನಿಂತರೆ ಈ ಸಿದ್ಧಾಂತಕ್ಕೆ ಹಗುರವಾದ ಅರ್ಥವನ್ನು ನೀಡಿದಂತಾಗುತ್ತದೆ. ಆದರೆ ಅನುಭವಗಳ ನಿರೂಪಿಸುವಿಕೆಯಿಂದ ಅದು ಸಾಬೀತಾದರೆ ಈ ಸಿದ್ಧಾಂತಕ್ಕೆ ಮೌಲ್ಯವೊದಗುತ್ತದೆ. ಆಗ ಮಾತ್ರ ನಿಜವಾದ ಸಮಸ್ಯೆಗಳ ಅನಾವರಣ ಸಾಧ್ಯವಾಗುತ್ತದೆ.

'ಶಿವಪ್ರಕಾಶರ ಕಾವ್ಯವು ಇತಿಹಾಸ, ಪುರಾಣಗಳನ್ನು ಬಗೆದು ಪ್ರತಿ ಪುರಾಣಗಳನ್ನು ಸೃಷ್ಟಿಸಿದಂತೆಯೇ ಪ್ರತಿಭಾ ಕೂಡ ಪ್ರತಿಲೋಕವೊಂದನ್ನು ಹುಡುಕಿ ತೆಗೆದುಕೊಟ್ಟಿದ್ದಾರೆ. ಗತಕಾಲದಲ್ಲಿ ಕಳೆದುಹೋಗಿರುವ ಅನುಭವಗಳ ಸೀಮೆಗಳನ್ನು ಹುಡುಕಿ ತೆಗೆದು ನಮಗೆ ಪ್ರಸ್ತುತಗೊಳಿಸುವುದು ಒಂದು ಬಗೆಯ ಸಾಧನೆಯಾದರೆ, ನಮ್ಮ ನಡುವೆಯೇ ಬಗಲಲ್ಲಿಯೇ ಅಡಗಿ ಕುಳಿತಿರುವ ಅಪರಿಮಿತವಾದ ವಿಸ್ತಾರಗಳನ್ನು ತೆರೆದು ತೋರಿಸುವ ಸಾಹಸವೇನೂ ಕಡಿಮೆಯದಲ್ಲ'.[3] ಈ ಮಾತುಗಳು ಪ್ರತಿಭಾರ ಕಾವ್ಯ ಕೇವಲ ಹೆಣ್ಣನ್ನು ವೈಯಕ್ತಿಕ ನೆಲೆಯಿಂದ ಹಲವು ಆಯಾಮುಗಳಲ್ಲಿ ಗುರುತಿಸಿದ್ದರೂ ಅದು ತೋರುವ ಸತ್ಯಗಳು ಗಟ್ಟಿತನ ಪಡೆದಿವೆ ಎಂಬುದನ್ನು ಗುರುತಿಸುತ್ತವೆ. ಅದರಲ್ಲಿಯೂ ಪುರುಷ ಕವಿಯೊಬ್ಬರೊಂದಿಗೆ ಪ್ರತಿಭಾ ಅವರನ್ನು ತುಲನೆ ಮಾಡಿರುವುದು ವಿಶೇಷವಾದರೂ ಉಚಿತವಾಗಿದೆ.

ಹೆಣ್ಣಿನ ಪ್ರತಿಲೋಕವೊಂದನ್ನು ಸೃಷ್ಟಿಸುವಾಗ ಪ್ರತಿಭಾ ಚಿತ್ರಿಸುವುದು ಹೆಣ್ಣಿನ ಕ್ರೌರ್ಯ ತುಂಬಿದ ಬದುಕನ್ನು. 'ಪ್ರತಿಭಾ ಕಾವ್ಯದಲ್ಲಿ ನನಗೆ ಹಾಗೆ ನಿರಂತರವಾಗಿ ಕಾಣಿಸುವ ಕೆಲವು ವಸ್ತು ವಿಶೇಷಗಳೆಂದರೆ ಹೆಣ್ಣಿನ ಬದುಕು ಮತ್ತು ವ್ಯಕ್ತಿತ್ವಗಳೆರಡನ್ನೂ ಆವರಿಸಿರುವ ಹಿಂಸೆ, ವ್ಯಕ್ತಿತ್ವದ ಹುಡುಕಾಟದಲ್ಲಿರುವ ಆಧುನಿಕ ಹೆಣ್ಣಿನ ಇಕ್ಕಟ್ಟುಗಳು ಹಾಗೂ ಈ ಹಿಂಸೆ ಮತ್ತು ಇಕ್ಕಟ್ಟುಗಳಲ್ಲಿಯೂ ಮುಕ್ಕಾಗದ ಜೀವನ ಪ್ರೀತಿ'.[4]

ಪ್ರತಿಭಾ ಅವರ ಕಾವ್ಯವನ್ನು ಗಮನಿಸಿದಾಗ ಪುರುಷ ಸಂಸ್ಕೃತಿ ಎಂಬುದು ಒಂದು ನಿಶ್ಚಿತ ಚಹರೆಯನ್ನು ಒಳಗೊಂಡಿದೆಯಾದರೂ, ಪುರುಷ ಹೆಣ್ಣಿನ ಬದುಕಿನಲ್ಲಿ ಎದುರಾಗುವ ಸಂದರ್ಭಗಳಲ್ಲಿ ವರ್ತಿಸುವ, ಯೋಚಿಸುವ ಕ್ರಮದಿಂದ ಹೆಣ್ಣಿನ ಜಗತ್ತಿಗೆ ಅಪರಿಚಿತನಂತೆ ಕಾಣುತ್ತಾನೆ ಹಾಗೂ ವ್ಯವಸ್ಥೆಯ ಪರವಾಗಿರುತ್ತಾನೆ. ಈ ಅಂಶಗಳನ್ನು ಅಭಿವ್ಯಕ್ತಿಯಲ್ಲಿ ಕಂಡರಿಸುವಾಗ ಯಾವುದೇ ಅಡೆತಡೆಗಳನ್ನು ಹಾಕಿಕೊಳ್ಳದೆ ಸ್ಪಷ್ಟವಾಗಿ ಎಲ್ಲವನ್ನೂ ಹೇಳುವುದರಿಂದ ಪ್ರತಿಭಾ ಇತರ ಕನ್ನಡ ಮಹಿಳಾ ಕವಿಗಳಿಗಿಂತ ಭಿನ್ನವಾಗಿ ಕಾಣುತ್ತಾರೆ.

ಪ್ರತಿಭಾ ನಂದಕುಮಾರ್ ಅವರು ಕನ್ನಡದಲ್ಲಿ ಕವಿತೆ ಬರೆಯುತ್ತಿಲ್ಲ. ಅವರು ಪುರುಷರಿಗೆ ಸುಪರಿಚಿತವಾದ ಯಾವುದೇ ಭಾಷೆಯಲ್ಲಿಯೂ ಕವಿತೆ ಬರೆಯುತ್ತಿಲ್ಲ.

> ನನಗೆ ಭಾಷೆಯಿಲ್ಲ
> ನಿನಗೆ ಕಿವಿಯಿಲ್ಲ
> ಮಾತನಾಡುವುದು ಹೇಗೆ?

ನನಗೆ ಆಕಾರವಿಲ್ಲ
ನಿನಗೆ ನೋಟವಿಲ್ಲ
ಕಾಣಿಸುವುದು ಹೇಗೆ?

ನನ್ನ ಬಿಕ್ಕಳಿಕೆ ಮತ್ತು
ನಿನ್ನ ಆಲಿಂಗನಗಳ ನಡುವೆ
ಸಮಾಜ ವಿಜ್ಞಾನದ ಗೋಡೆ (ಸಾಧ್ಯವೇ ಇಲ್ಲ, ಒಂದು ಹೆಂಗಸಿನ
ಜೊತೆ ನಾನು ಇಂಥಾ ಗಂಭೀರ ವಿಷಯ
ಚರ್ಚಿಸುತ್ತೇನೆಯೋ? ಎಂದ ಗಂಡಸಿಗೆ)

ಹಾಗೆಂದು ಅದು ನಮಗೆ ತಲುಪದ ಕವಿತೆಯಲ್ಲ. ನಾವು, ಗಂಡು ಗರ್ವವನ್ನು ಉಳಿದು, ನಾನು-ನೀನು ಎಂಬ ಉಭಯಭೇದವನ್ನು ಅಳಿದು ತೆರೆದುಕೊಂಡಾಗ ಈ ಕವಿತೆಯೂ ಮಾನವರೆಲ್ಲರ ಪಾಡಿನ ಒಂದು ಬಗೆಯಾಗಿ ನಮ್ಮನ್ನು ತಲುಪುತ್ತದೆ'.[5] ಪರಸ್ಪರ ಸಂಪರ್ಕ ಕಡಿದುಕೊಂಡಿರುವ ಬಗೆಯಲ್ಲಿ ಸ್ತ್ರೀಯರ ಮಾತುಗಳನ್ನು ಕಡೆಗಣಿಸುವ ಪುರುಷ ಪ್ರವೃತ್ತಿಯ ಬಗೆಗೆ ವ್ಯಕ್ತವಾಗಿರುವ ಪ್ರತಿಕ್ರಿಯೆಯಾಗಿ ಈ ಮೇಲಿನ ಕವಿತೆ ಕಾಣುತ್ತದೆ. ಆದರೆ ವಿಮರ್ಶಕರಾದ ಎಚ್.ಎಸ್. ರಾಘವೇಂದ್ರರಾವ್‌ರವರು ಗುರುತಿಸುವಂತೆ ಮಹಿಳಾ ಕಾವ್ಯವನ್ನು ಮಾನವರ ಪಾಡನ್ನು ಹೇಳುವ ಬಗೆಯಾಗಿ ಗುರುತಿಸುವುದು ಕಡಿಮೆ ಎಂದೇ ಹೇಳಬಹುದು.

ಹೆಣ್ಣಿನ ಅಸ್ತಿತ್ವವನ್ನು ನಾನಾ ಬಗೆಯಲ್ಲಿ ಸ್ಥಾಪಿಸಲೆತ್ನಿಸುವ ಪ್ರತಿಭಾ ಅವರ ಕಾವ್ಯವು ಅವಳ ಅಂತಃಸತ್ವನ್ನು ಸಮಾಜಕ್ಕೆ ಅಪರಿಚಿತವಾದ ನೆಲೆಗಳಲ್ಲಿ ದಾಖಲಿಸುತ್ತದೆ. ಹೆಣ್ಣಿನ ಹೃದಯವೊಂದು ಸ್ಮಶಾನ, ವಿಸ್ತಾರ, ಹೆಣ್ಣು ಮತ್ತು ರಕ್ತ, ಹೆಣ್ಣು-ಕಾಡು, ಹಿಮದ ಹಾದಿ ಮುಂತಾದ ಕವಿತೆಗಳು ಅವಳ ಅವ್ಯಕ್ತ ಪ್ರಪಂಚದ ಪರಿಚಯವನ್ನು ಮಾಡಿಕೊಡುತ್ತವೆ.

'ಅಲ್ಲಿ ಚಿತೆಗಳು ಉರಿಯುತ್ತವೆ
ಗೋರಿಗಳನ್ನು ತೋಡಲಾಗುತ್ತದೆ
ಸ್ಮಾರಕಗಳು ಅಡಿಗೊಂದರಂತೆ'[6]
(ಹೆಣ್ಣಿನ ಹೃದಯವೊಂದು ಸ್ಮಶಾನ)

ಹೀಗೆ ಅಂತರಂಗದ ನೂರಾರು ನಿರೀಕ್ಷೆ, ಕನಸುಗಳನ್ನು ಭಗ್ನಗೊಳಿಸುವ ಮೂರು ಗಂಟು ಹಾಕಿದವನು:

'ಅಡಿಗೆ ಮನೆಯ ಬಾಗಿಲಲ್ಲಿ ನಿಂತು ನೋಡಿ
ಥೂ ಎಂದು ಕ್ಯಾಕರಿಸಿ ಅವನು
ಟಿ.ವಿ. ಆನ್ ಮಾಡುತ್ತಾನೆ. ಊರ್ಮಿಳೆಯ
ಬಳಕುವ ರಂಗೀಲಾ ಸೊಂಟದಲ್ಲಿ ಕರಗುತ್ತಾ
ಕುರ್ಚಿಯಲ್ಲಿ ಹಿಂದಕ್ಕೊರಗುತ್ತಾನೆ
ಪಾತ್ರೆ ತೊಳೆಯುವ ಅವಳ ಮುಖದಲ್ಲಿ
ವಿಚಿತ್ರ ಮುಗುಳ್ನಗೆ'[7]

ಹೆಣ್ಣಿನ ಬಾಹ್ಯಸೌಂದರ್ಯಕ್ಕೆ ಮಹತ್ವ ಕೊಡುವವನಾಗಿ ಕಾಣುತ್ತಾನೆ. ಇದೇ ಸಮಯದಲ್ಲಿ ಅವಳಿಗೆ ಯಾರೋ ಸ್ಮಶಾನದ ಕಾವಲುಗಾರನ ಕತೆ ಹೇಳುತ್ತಾರೆ. ಅಲ್ಲಿ ಚಂದ್ರಮತಿಯು ಹೀಗೆ ಪ್ರಾರ್ಥಿಸುತ್ತಾಳೆ:

'ಅವಳ ಪ್ರಾರ್ಥನೆ! ಮಗಂ ಮುಕ್ತನಾಗಲಿ
ಮಂತ್ರಿ ನೆನೆದುದಾಗಲಿ ಕಲಿ ಹರಿಶ್ಚಂದ್ರರಾಯ
ಸತ್ಯವೆರಸಿ ಬಾಳ.....
ಚರಿತ್ರೆಯ ತುಂಬ ಇಂತಹವೇ ಕತೆಗಳು
ಅವಳು ನಕ್ಕಳು'[8]

ಚರಿತ್ರೆಯ ಪಾತ್ರಗಳಲ್ಲಿ ಕಂಡುಬರುವ ನಿಷ್ಠೆ, ಮೌಲ್ಯಗಳು ಪೊಳ್ಳುತನದಿಂದ ಕೂಡಿದ್ದು, ಅವು ಇಂದಿಗೂ ಪಾಲಿಸಲ್ಪಡುತ್ತಿರುವುದರ ಹಿಂದೆ ಇರುವ ವ್ಯಂಗ್ಯವನ್ನು ಚಿತ್ರಿಸಿದ್ದಾರೆ. ಹೆಣ್ಣಿನ ಹೃದಯದ ಹಂಬಲಗಳನ್ನು ಮುಚ್ಚಿಹಾಕಿ ಸೃಷ್ಟಿಸಿರುವ ಇಂತಹ ಕತೆಗಳನ್ನು ಕವನದ ನಾಯಕಿ ಹಾಸ್ಯ ಮಾಡಿ ನಗುತ್ತಾಳೆ.

'ಹಿಮದ ಹಾದಿ' ಕವಿತೆಯು ಹೆಣ್ಣು ತನ್ನ ಬದುಕಿನಲ್ಲಿ ಎದುರಾಗುವ ಆದರೆ ಪುರುಷರವಾಗಿರಲು ಸಾಧ್ಯವಿಲ್ಲದ ಅನುಭವಗಳ ಸ್ಪಷ್ಟ ದಾಖಲೆಯಾಗಿ ಕಂಡು ಬರುತ್ತದೆ.

'ಪ್ರತಿದಿನ ಶೇವ್ ಮಾಡಲು ಬೇಸತ್ತ ಗಂಡಸರಿಗೆ
ದಾಡಿ ಪರಿಹಾರ
ಪ್ರತಿ ತಿಂಗಳ ರಾಡಿಗೆ ಬೇಸರಿಸುವ ಹೆಣ್ಣು
ಏನು ಮಾಡಬೇಕು
ದೇಹದ ಉಬ್ಬುತಗ್ಗುಗಳ ಕಾರಣಕ್ಕೆ
ಹೇಳಬೇಕಾದ ಎಷ್ಟೊಂದು ಸುಳ್ಳುಗಳು'[9] (ಹಿಮದ ಹಾದಿ)

ಹೆಣ್ತನದ ಮಿತಿ ಹಾಗೂ ಸಮಾಜದ ನಿರ್ಬಂಧಗಳ ನಡುವೆಯೂ ತನ್ನ ಚೈತನ್ಯದ ಶಕ್ತಿಯ ಬಗೆಗೆ ಹೀಗೆ ಹೇಳುತ್ತಾಳೆ:

'ಬಾಳೆಯಾದರೆ ಕತ್ತರಿಸಿದರೂ
ಪುಟಿ ಪುಟಿದು ನೂರೆಂಟು ಕುಡಿಗಳು
ಮಾವು, ಹಲಸು, ತೇಗವಾದರೆ
ನೆಟ್ಟಗೆ ಆಕಾಶಕ್ಕೆ ಮುಖಮಾಡಿ
ಕುರ್ಚಿ ಮೇಜು ಮಂಚವಾಗಿ ಪರಿವರ್ತನೆಗೊಂಡು
ನಾನು ಸಾಯುವುದಿಲ್ಲ.'[10]

ಇದೇ ಕವಿತೆಯ ಕೊನೆಯ ಸಾಲುಗಳು ಇಂತಹ ನಿರ್ಬಂಧ, ಚೈತನ್ಯಗಳ ನಡುವೆ ಆಶಾವಾದವನ್ನು ಧ್ವನಿಸುತ್ತವೆ.

'ಹೆಣ್ಣಿನ ಹಾದಿಯಲ್ಲಿ
ಕಲ್ಲಿಲ್ಲ, ಮುಳ್ಳಿಲ್ಲ
ಎಂದು ಇನ್ನಾದರೂ ಹಾಡಬಹುದೇ?[11]

ಪ್ರತಿಭಾ ಅವರ ಕವಿತೆಗಳಲ್ಲಿ ಹೆಣ್ಣು-ಗಂಡಿನ ಸಂಬಂಧಗಳು ಕೇವಲ ಸಮಾಜ ಗುರುತಿಸುವ ಮಾದರಿಗಳಲ್ಲಷ್ಟೇ ಅಲ್ಲದೆ ಇತರ ಬಗೆಯ ಸಂಬಂಧಗಳಾಗಿ ಕೂಡ ಕಾಣಿಸಿಕೊಳ್ಳುತ್ತವೆ ಹಾಗೂ ಅಂತಹ ಸಂಬಂಧಗಳು ಇರುವುದನ್ನು ಅವು ತೋರುತ್ತವೆ. ಅವರ 'ಈ ಮಾರ್ಗವು ಚಾಲನೆಯಲ್ಲಿಲ್ಲ', 'ಸಾಧ್ಯವೇ ಇಲ್ಲ, ಇಂಥಾ ಗಂಭೀರ ವಿಷಯವನ್ನು ಒಬ್ಬ ಹೆಂಗಸಿನೊಂದಿಗೆ ಚರ್ಚಿಸುತ್ತೇನೆಯೋ? ಎಂದ ಗಂಡಸಿಗೆ' 'ಸ್ವರ್ಗ' ಮುಂತಾದವು ಅಂತಹ ಕವಿತೆಗಳು. ಈ ಸಂಬಂಧಗಳ ಬಗೆಗೆ ಸ್ವತಃ ಕವಿಯೇ, 'ಎಲ್ಲರೂ ಗುರುತಿಸುವುದು ಯಾವುದಾದರೊಂದು ಮುಖ್ಯ ಅಸ್ತಿತ್ವದಿಂದ ಮಾತ್ರ, ಅವರ ಕೆಲಸ ಅಥವಾ ಸಾಮಾಜಿಕ ಸ್ಟೇಟಸ್‌ನಿಂದ ಇಂತಹವರ ಮಗಳು, ಹೆಂಡತಿ, ತಾಯಿ ಇತ್ಯಾದಿ. ಹಾಗೆ ಪರಿಚಯಿಸಿಕೊಳ್ಳುತ್ತಿರುವಾಗಲೇ ಅವಳು ಇನ್ನೂ ಹಲವಾರು ಆಗಿರುತ್ತಾಳಲ್ಲಾ ಅದರ ಬಗ್ಗೆ ಅವರಿಗೆ ಗೊತ್ತಿರುತ್ತದೋ ಇಲ್ಲವೋ? ಒಬ್ಬರ ಜೊತೆ ಮಾತಾಡುತ್ತಿರುವಾಗ ನೋಡುತ್ತಿರುವವರಿಗೆ ಒಂದು ಹೆಣ್ಣು ಒಂದು ಗಂಡಿನ ಜೊತೆ ಮಾತಾಡುತ್ತಿದೆ ಅಂತ ಅಥವಾ ಒಬ್ಬನ ಹೆಂಡತಿ ಇನ್ನೊಬ್ಬಳ ಗಂಡನ ಜೊತೆ ಅಂತ ಅಥವಾ ಒಬ್ಬಳು ಸ್ನೇಹಮಯಿ ಇನ್ನೊಬ್ಬ ಸ್ನೇಹಿತನ ಜೊತೆ ಅಂತ ಅಥವಾ ಒಬ್ಬಳು ಹಾದರಗಿತ್ತಿ ಇನ್ನೊಬ್ಬ ಕಾಮಿಯ ಜೊತೆ ಅಂತ ಅಥವಾ ಇಬ್ಬರು ಪ್ರಣಯಿಗಳು ಅಂತ ಅಥವಾ ಇಬ್ಬರು ನತದೃಷ್ಟರು ಅಂತ ಅಥವಾ ಇಬ್ಬರು

ಖದೀಮರು ಅಂತ ಅಥವಾ ಇಬ್ಬರು........ ಏನು ಬೇಕಾದರೂ ಆಗಿರಬಹುದು'[12] ಎಂದು ಹೇಳುತ್ತಾರೆ. ಈ ಬಗೆಯ ಹೆಣ್ಣು ಗಂಡಿನ ಸಂಬಂಧಗಳು ಈ ಸಮಾಜದಲ್ಲಿ ಗುರುತಿಸಲ್ಪಡುವುದಿಲ್ಲ. ಅವು ಇದ್ದೂ ಅಧಿಕೃತವಲ್ಲದಿರುವ ಸತ್ಯವನ್ನು ಇವರ ಅನೇಕ ಕವಿತೆಗಳು ಹೇಳುತ್ತವೆ.

ಪ್ರತಿಭಾ ಅವರ ಕವಿತೆಗಳಲ್ಲಿ ಕಾಣಸಿಗುವ ಹೆಣ್ಣುಗಳು ಬಹುಪಾಲು ಆಧುನಿಕ ಪರಿಸರದಲ್ಲಿ ಬದುಕುವವರು, ವಸಾಹತೋತ್ತರ ಘಟ್ಟದ ಬದಲಾದ ಸಾಮಾಜಿಕ, ಆರ್ಥಿಕ ಸಂದರ್ಭಗಳಲ್ಲಿ ಬದುಕುತ್ತಿರುವ ಇವರು ವೈಯಕ್ತಿಕ ನೆಲೆಯಲ್ಲಿ ತಮ್ಮ ಬದುಕಿನ ಬಗೆಗೆ ಆಲೋಚನೆ ಮಾಡಬಲ್ಲವರು. ಈ ದೃಷ್ಟಿಯಿಂದ ಇವರ ಕವಿತೆಗಳು ದಾಖಲಿಸುವ ಅನುಭವಗಳು ನಿರ್ದಿಷ್ಟ ಕಾಲದ ಚಾರಿತ್ರಿಕತೆಯನ್ನು ದಾಖಲಿಸುತ್ತವೆ. 'ಗೃಹಿಣಿಗೀತ', 'ಆ ಹುಡುಗಿ', 'ಕನಕ', 'ಮದುವೆಗೆ ಹೋದದ್ದು', 'ಕೇರ್ ಫ್ರೀ ಮಹಿಳೆಯರು' ಇತ್ಯಾದಿ ಆಧುನಿಕ ಹೆಣ್ಣುಗಳ ಬದಲಾದ ಬಿಕ್ಕಟ್ಟು, ಜೀವನಶೈಲಿಗಳನ್ನು ಹೇಳುತ್ತವೆ.

ಪ್ರತಿಭಾ ಅವರ ಕವಿತೆಗಳಿಗಿರುವ ಚಾರಿತ್ರಿಕವಾದ ಕಟ್ಟುವಿಕೆಯನ್ನು ಹೀಗೆ ಗುರುತಿಸಬಹುದು. 'ಒಂದೆಡೆಯಿಂದ ಅವರ ಕವಿತೆಗಳು ಮಹಿಳೆಯ ಆಲೋಚನಾ ಕ್ರಮವೊಂದು ಒಂದು ನಿರ್ದಿಷ್ಟ ಚಾರಿತ್ರಿಕತೆಯಲ್ಲಿ ಬೆಳೆದು ಬಂದ ಕ್ರಮ. ಇನ್ನೊಂದೆಡೆಯಿಂದ ಚರಿತ್ರೆಯ ಬದಲಿಗೆ ಮತ್ತೊಂದು ಚರಿತ್ರೆಯನ್ನು ಕವಿತೆಯಲ್ಲಿ ರೂಪಿಸಿಕೊಂಡಿರುವುದು ಮಹಿಳಾ ಚರಿತ್ರೆಯನ್ನು ಅವರು ವೈಯಕ್ತಿಕ ಅನುಭವಗಳ ಮೂಲಕ ಒಂದು ನಿರ್ದಿಷ್ಟ ನಿರೂಪಣಾ ಕ್ರಮದಲ್ಲಿ ವ್ಯಕ್ತಪಡಿಸುತ್ತಾರೆ. ಆದುದರಿಂದ ಪ್ರತಿಭಾ ಅವರ ಕವಿತೆಗಳಲ್ಲಿ 'ಚರಿತ್ರೆ'ಯನ್ನು ಬೇರೊಂದು ಕೋನಗಳಲ್ಲಿ ಕಟ್ಟುವ ವಿಧಾನವಿದೆ'.[13] ಬದಲಾದ ಸಾಮಾಜಿಕ, ಆರ್ಥಿಕ ಸಂದರ್ಭಗಳಲ್ಲಿ ಚರಿತ್ರೆಯ ಕಟ್ಟುವಿಕೆ ಮತ್ತು ಮರುಕಟ್ಟುವಿಕೆಗಳು ಪ್ರತಿಭಾ ಅವರ ಕವಿತೆಗಳಲ್ಲಿ ನಡೆದಿವೆ ಎನ್ನಬಹುದು. 'ನಾನು ಬ್ರಾಹ್ಮಣ ಕನ್ಯೆ', 'ಕಮಲಾ ಸುರೈಯಾ ಆದದ್ದು', 'ಕಡೆಗೆ ಕರುಣಾಳು ರಾಘವನಲ್ಲಿ ತಪ್ಪಿಲ್ಲ' ಇವೇ ಮುಂತಾದ ಕವಿತೆಗಳನ್ನು ಉದಾಹರಿಸಬಹುದು. 'ನಾನು ಬ್ರಾಹ್ಮಣ ಕನ್ಯೆ' ಕವಿತೆಯಲ್ಲಿ ಜಾತಿಯ ಸಾಂಪ್ರದಾಯಿಕ ಚೌಕಟ್ಟನ್ನು ಕವಿತೆಯ ನಾಯಕಿ ಮೀರುವುದನ್ನು ಕಾಣುತ್ತೇವೆ.

'ಭಕ್ತ ನೀನು
ಭವಿ ನಾನು
ಬೇಡವೆಂದರೂ ಕೊರೆಯುತ್ತಿದೆ ಹುಳ

ಕದಲಿಸಲಿ ಹೇಗೆ
ನನ್ನ ತೊಡೆ ಮೇಲೆ
ನಿನ್ನ ತಲೆ ವಿರಮಿಸಿದೆ

ಕಣ್ಣು ಬಿಟ್ಟಾಗ ಶಪಿಸುವೆ
ನಿನಗೆ ನಿನ್ನ ವ್ರತವೇ ಪ್ರಧಾನ
ಶಪಿತೆ ನಾನು
ಯುಕ್ತ ಕಾಲಕ್ಕೆ ಎಲ್ಲ ಮರೆವೆ
ನನಗೆ ನನ್ನ ಭ್ರಮೆಯೂ ಗೌಣ

ಬುದ್ಧಿ ನೀನು, ಭಾವ ನಾನು
ವಿದ್ಯುದಾಲಿಂಗವೆಲ್ಲ ಸುಳ್ಳು'[14] (ನಾನು ಬ್ರಾಹ್ಮಣ ಕನ್ಯೆ)

ಎನ್ನುವಲ್ಲಿ ಪುರುಷ ತನ್ನ ಪ್ರೇಮದ ವಿಷಯದಲ್ಲಿ ಬುದ್ಧಿಪೂರ್ವಕವಾಗಿ ಯೋಚಿಸುವುದನ್ನು ರೂಢಿಸಿಕೊಂಡಿರುವುದನ್ನು, ಆದರೆ ಹೆಣ್ಣು ಆ ವಿಷಯ ಬಂದಾಗ ಭಾವನಾತ್ಮಕವಾಗಿಯೇ ಯೋಚಿಸುವುದನ್ನು ಇಲ್ಲಿ ಕವಿ ಕಾಣಿಸಿದ್ದಾರೆ. ಜಾತಿಯ ಪ್ರಶ್ನೆ ಬಂದಾಗ ಹೆಣ್ಣು ಅದನ್ನು ಸಮಸ್ಯೆಯಾಗಿ ಪರಿಗಣಿಸುವುದಕ್ಕಿಂತ ಪುರುಷ ಆ ನೆಲೆಯಲ್ಲಿ ಹೆಚ್ಚು ಸಾಂಪ್ರದಾಯಿಕನಾಗಿ ಕಾಣುವುದನ್ನು ಕವಿತೆ ಸೂಚಿಸುತ್ತದೆ.

ನಮ್ಮ ಸಂಸ್ಕೃತಿಯಲ್ಲಿ ಅಡಗಿರುವ ಹಲವು ಕಲ್ಪನೆಗಳನ್ನು ಇವರ ಕವಿತೆಗಳು ಪ್ರಶ್ನಿಸುತ್ತವೆ ಹಾಗೂ ಭಂಜಿಸುತ್ತವೆ. 'ಪ್ರತಿವ್ರತೆ ಅಲ್ಲ', 'ಕಾರಣ', 'ಅರ್ಧನಾರೀಶ್ವರ' ಮುಂತಾದ ಕವಿತೆಗಳಲ್ಲಿ ಈ ಭಂಜಿಸುವಿಕೆಯನ್ನು ಕಾಣಬಹುದು. ನಮ್ಮ ಸಂಸ್ಕೃತಿಯ ಅರ್ಧನಾರೀಶ್ವರ ಕಲ್ಪನೆಯು ಗಂಡಾದ ಈಶ್ವರನ ದೇಹದ ಅರ್ಧ ಭಾಗ ಹೆಣ್ಣಿನದೆಂದು ಹೇಳುತ್ತದೆ. ಅರ್ಧನಾರೀಶ್ವರ ಕವಿತೆಯಲ್ಲಿ ಈ ಕಲ್ಪನೆಯನ್ನು ಕವಿ ವ್ಯಂಗ್ಯ ಮಾಡಿದ್ದಾರೆ.

'ನಾಚಿಕೆಯಾಗಬೇಕು ಜೀವಕ್ಕೆ
ಅರ್ಧ ಕ್ರೆಡಿಟ್ ತೆಗೆದುಕೊಳ್ಳುವುದಕ್ಕೆ
ಹೆಣ್ತನದ ಸೂಚನೆಯೆಂದು ಒಂದು
ಸ್ತನ ಧರಿಸಿಬಿಟ್ಟರೆ ಆಯಿತೇ ಲಿಂಗಕ್ಕೆ?
ಅರೆಬಸಿರು ತಡೆಯಬಹುದೇ ಪೂರ್ಣ ಗರ್ಭದ ಹೊರೆ?
ಇಡೀ ದೇಹವೇ ತಡೆಯಲಾಗದು
ಪಾರ್ಶ್ವಕ್ಕೆ ಸಾಕೇ ಪ್ರಣಯ ಬೇಗೆ?'[15] (ಅರ್ಧನಾರೀಶ್ವರ)

ಎಂದು ಕೇಳಿದ ನಂತರ 'ಗಂಡೆಂದರೆ ಒಂದು ವೀರ್ಯ ತಾನೇ?' ಎಂದು ಪುರುಷ ನಿರ್ಮಿತ ಕಲ್ಪನೆಯ ಹಿಂದಿರುವ ಕೃತಕತೆಯನ್ನು ಬಹಿರಂಗಪಡಿಸುತ್ತಾರೆ.

ಸತ್ವಶಾಲಿಯಾದ ಸೃಜನಶೀಲ ಸಾಹಿತ್ಯವು ಒಬ್ಬ ಮಹಿಳೆಯಿಂದ ಬರಬೇಕಾದರೆ ಮೊದಲಿಗೆ ಆಕೆ ತನ್ನ ಸ್ವಾಂತಂತ್ರ್ಯವನ್ನು ಗಳಿಸಿಕೊಳ್ಳಬೇಕು. ವ್ಯಕ್ತಿಯಾಗಿ ಅಥವಾ ಒಬ್ಬಳು ಮನುಷ್ಯಳಾಗಿ ತನ್ನ ಸುತ್ತಣ ಪ್ರಪಂಚವನ್ನು ಗ್ರಹಿಸಿ ಅಭವ್ಯಕ್ತಿಸುವಂತಿರಬೇಕು. ಆಗ ಮಾತ್ರ ಸತ್ವಶಾಲಿಯಾದ, ವಿಶ್ವಾತ್ಮಕವಾದ ಸಾಹಿತ್ಯ ಬರಲು ಸಾಧ್ಯ ಎಂದು ಅಭಿಪ್ರಾಯಪಡುವ ಈ ಹೇಳಿಕೆ 'ಮಹಿಳೆಯ ಅಪಾರ ಬಂಧನಗಳು ಎಂದು ಮುರಿದು ಬೀಳುತ್ತವೆಯೋ, ಎಂದು ಆಕೆ ತನ್ನ ಮೂಲಕ ತನ್ನನ್ನು ಕಂಡುಕೊಳ್ಳಬಲ್ಲಳೋ ಅಂದು ಆಕೆ ಕೂಡ ಒಬ್ಬ ಕವಿಯಾಗಬಲ್ಲಳು. ಅನೂಹ್ಯವಾದದ್ದನ್ನು ಕಂಡು ಹಿಡಿದು ಹೊರತರಬಲ್ಲಳು'[16] ಎಂಬುದನ್ನು ನೀಡಿದ ರ್‍ಯಾಂಬಾದನ ಭವಿಷ್ಯವಾಣಿಯನ್ನು ನಿಜವಾಗಿಸುವತ್ತ ಹೊರಟ ಕವಿಯಂತೆ ಪ್ರತಿಭಾ ಕಾಣುತ್ತಾರೆ. ಆದ್ದರಿಂದಲೇ ಪ್ರತಿಭಾರ ಕವಿತೆಗಳಲ್ಲಿ ತನ್ನತನವನ್ನು ಹುಡುಕುವ ಅಥವಾ ವ್ಯಕ್ತಿತ್ವದ ಹುಡುಕಾಟವೇ ಮುಖ್ಯವಾಗಿದೆಯೆನ್ನಬಹುದು.

'ಅವರ ಬಹುತೇಕ ಕವಿತೆಗಳಲ್ಲಿ ಕಂಡು ಬರುವ ಅಂಶವೆಂದರೆ ಒಬ್ಬಳು ಹೆಣ್ಣು, ಒಬ್ಬ ಹೆಣ್ಣಾಗಿ ಅನುಭವಿಸುವ ಅಸ್ತಿತ್ವವಾದಿ ಅರ್ಥಗಳು ಮುಖ್ಯ. ಅಂದರೆ ಇಲ್ಲಿ ವೈಯುಕ್ತಿಕತೆಯು ಪ್ರಧಾನವಾಗುತ್ತದೆ. ಈ ವೈಯುಕ್ತಿಕತೆಯು ಅರ್ಥಹೀನವಾದದ್ದೆಂದು ಅವರ ಅನಿಸಿಕೆಯಲ್ಲ. ಆದರೆ ವೈಯಕ್ತಿಕತೆಗೆ, ಜೀವನಕ್ಕೆ ಒಂದು ಅರ್ಥವನ್ನು ಹುಡುಕುವಾಗ ಅಸ್ತಿತ್ವವಾದಿಗಳಂತೆ ಅರ್ಥವಿಲ್ಲದೆಯೂ ಜೀವನ ಇರಲಾರದೆ ಎಂದು ಅವರು ಕೇಳುವುದಿಲ್ಲ. ಜೀವನದ ಅರ್ಥಪೂರ್ಣತೆಯೆನ್ನುವುದು ಹೆಣ್ಣು ಸಾಧಿಸಿಕೊಳ್ಳುವ ಕ್ರಮದಲ್ಲಿದೆ ಎನ್ನುವುದು ಅವರ ಕವಿತೆಗಳಲ್ಲಿ ಕಂಡು ಬರುತ್ತದೆ.'[17] ಹೀಗೆ ತಮ್ಮ ಕವಿತೆಗಳಲ್ಲಿ ವ್ಯಕ್ತಿನಿಷ್ಠ ಅನುಭವದ ಮೂಲಕ ತನ್ನತನದ ಶೋಧವನ್ನು ವಿವಿಧ ರೀತಿಯ ಸಂಬಂಧಗಳನ್ನು ಶೋಧಿಸುತ್ತಾರೆ.

ಪ್ರತಿಭಾ ಅವರ ಅನೇಕ ಕವಿತೆಗಳಲ್ಲಿ ಗಂಡು-ಹೆಣ್ಣಿನ ದೇಹರೂಪೀ ಸಂಬಂಧಗಳು ಕೇಂದ್ರ ವಸ್ತುವಾಗಿ ಬಂದಿದೆ. ಆಹಾ, ಪುರುಷಾಕಾರಂ!, 'ರಾಸಕ್ರೀಡೆ ಮತ್ತು ನಂತರ', 'ಮಹಾನಿರ್ಗಮನ', 'ಕಥಾನಕ' ಮುಂತಾದ ಕವಿತೆಗಳು ಈ ರೀತಿಯ ವಸ್ತುಗಳನ್ನು ಒಳಗೊಂಡಿವೆ.

'ಶಾಶ್ವತ ಗುರುತುಗಳು ಅವನ ಏರಿಳಿವ ಎದೆಯಲ್ಲಿ
ಅವಳ ಒಡಲಲ್ಲಿ ಬಿರಿದ ತುಟಿ ತೊಡೆಯ ಸ್ನಾಯುಗಳಲ್ಲಿ
ಹಿತದ ನೋವು. ಇದು ಲಕ್ಷಾ ಗೃಹಕ್ಕಿದು ಮತ್ತೊಂದಕ್ಕೆ ಎಂದು
ಎಣಿಸೆಣಿಸಿ ಬೀಸಿದ ಗದೆ ಪೆಟ್ಟಿಗೆ ಕುಸಿದವನಂತೆ ತನ್ನ
ದಾಳಿಗೆ ಹೈರಾಣಾಗಿ ಪವಡಿಸಿದ್ದ ಅವನು ಅವಳ ಪೃಷ್ಠಕ್ಕೊಂದು
ಕೈಕೊಟ್ಟು ಸೆಳೆಯುವವನಂತೆ ಈಗಲೇ ಇನ್ನೆರಡು ಕ್ಷಣಗಳಲ್ಲಿ
ಮತ್ತೆ ತೊಡಗುವವನಂತೆ ರಾಸಕ್ರೀಡೆಗೆ'[18] (ರಾಸಕ್ರೀಡೆ ಮತ್ತು ನಂತರ)

ಇಲ್ಲಿ ಹೆಣ್ಣು-ಗಂಡಿನ ಲೈಂಗಿಕ ಸಂಬಂಧಗಳನ್ನು ವೈರುಧ್ಯದ ನೆಲೆಯಲ್ಲಿ ಇಟ್ಟಿರುವುದರ ಜೊತೆಗೆ, ಇಂತಹ, ಹೆಣ್ಣಿಗೆ ನಿಷಿದ್ಧವೆನಿಸಿದ್ದ ವಸ್ತುವನ್ನು ಕಾವ್ಯಕ್ಕೆ ಆರಿಸಿಕೊಂಡಿರುವುದೂ ಮಹತ್ವದ್ದಾಗಿಯೇ ಕಾಣುತ್ತದೆ. ಈ ಬಗೆಯ ಇತರ ಕವನಗಳಾದ 'ಗರ್ವ', 'ವೃಥಾ ಒಂದು ಕವನ', 'ಮಹಾನಿರ್ಗಮನ' ಕವನಗಳ ಬಗೆಗೆ ಕವಿತಾ ಬಿ. ರೈ ಅವರು 'ಈ ಮೂರು ಕವನಗಳಿಗೆ ಎರಡು ಸ್ತರಗಳ ಅಸ್ತಿತ್ವವಿದೆ. ಒಂದು ಘೋಷಿತ ಅಭಿವ್ಯಕ್ತಿ ತತ್ತ್ವ. ಇಲ್ಲೆಲ್ಲಾ ಕಾಮ ಅರ್ಥಪರಂಪರೆಯಲ್ಲಿ ಒಂದೇ ಸ್ತರದಲ್ಲಿ ಕೆಲಸ ಮಾಡುತ್ತದೆ. ಆದರೆ ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಇವುಗಳ ಒಂದು ನಿರ್ದಿಷ್ಟ ಅರ್ಥ ಹೊರಡುವುದು ಇಲ್ಲಿಂದಲೇ. ಹೆಣ್ಣು-ಗಂಡಿನ ಶರೀರದಲ್ಲಿನ ದ್ವಂದ್ವ ಸ್ತರಗಳನ್ನು ಇದು ಪರಿಣಾಮಕಾರಿಯಾಗಿ ಅನಾವರಣಗೊಳಿಸುತ್ತದೆ. ಪ್ರತಿಭಾ ಅವರ ಕವನಗಳಲ್ಲಿ ಅನಾವರಣಗೊಳ್ಳುವ ಸಂಭೋಗಾನುಭವದ ಪರಸ್ಪರ ವೈರುಧ್ಯತೆಗಳೇ ಸ್ತ್ರೀವಾದ ನಿರೂಪಿಸುವ ಭಿನ್ನತೆಯ ಆಯಾಮವಾಗಿದೆ. ಎಂದರೆ ಅಭಿವ್ಯಕ್ತಿ ಸಾಮಗ್ರಿಯೇ ಅಭಿವ್ಯಕ್ತವನ್ನು ಸಂಪೂರ್ಣವಾಗಿ ಶಕ್ತವಾಗಿ ನಿಯಂತ್ರಿಸುತ್ತದೆ. ಮಾತ್ರವಲ್ಲದೆ ಎಲ್ಲ ಅನುಭವಗಳೂ ಅಂತಿಮವಾಗಿ ಹೆಣ್ಣಿನ ವಾಸ್ತವ ಸ್ಥಿತಿಯನ್ನು ಹಲವು ಬಗೆಯಲ್ಲಿ ಬಗೆಯುತ್ತವೆ'.[19]

ಗಂಡಿನ ಅಧಿಕಾರಕ್ಕೆ ಕಾರಣವೆಂದೇ ತಿಳಿಯಲಾಗಿರುವ ಲೈಂಗಿಕ ಮೇಲ್ಮೆಯನ್ನು ಈ ರೀತಿಯ ಕವನಗಳು ಪಲ್ಲಟಗೊಳಿಸುತ್ತವೆ. ಈ ಮೂಲಕ ಹೆಣ್ಣನ್ನು ಮೇಲ್‌ಸ್ತರದವಳೆಂದು ಸಾಧಿಸುವುದಿಲ್ಲ ಬದಲಿಗೆ ಹೀಗೂ ಒಂದು ಸಾಧ್ಯತೆ ಇದೆ ಎಂಬ ಅರಿವನ್ನು ನೀಡುತ್ತದೆ. ಈ ಸಾಧ್ಯತೆಯನ್ನು ನಿರೂಪಿಸವ ಮೂಲಕ ಗಂಡು ಸ್ಥಾಪಿಸಿಕೊಂಡಿರುವ ಅಧಿಕಾರದ ನೆಲೆ ಕೂಡ ಆಕಸ್ಮಿಕವೇ ಆಗಬಹುದಾಗಿದೆ.

'ಪ್ರತಿಭಾರ ಬಹುತೇಕ ಕವಿತೆಗಳು ಲೈಂಗಿಕ ಯಜಮಾನಿಕೆಯನ್ನು ವಿರೋಧಿಸುತ್ತವೆ ಮತ್ತು ಅದರ ಮುಖಾಂತರ ಪುರುಷ ಕೇಂದ್ರಿತ ದೇಹರೂಪಗಳನ್ನು

ಹೆಣ್ಣಿನ ಮುಖಾಂತರ ಮುಖಾಮುಖಿಯಾಗಿಸುತ್ತವೆ. ಹಾಗಾಗಿ ಪ್ರತಿಭಾರ ಕವಿತೆಗಳಲ್ಲಿ ಬರುವ ಗಂಡು ಹೆಣ್ಣಿನ ಸಂಬಂಧ ಮೂಲತಃ ಬರಿಯ ದೇಹರೂಪಿಯಾದ ಸಂಬಂಧವಾಗಿ ಉಳಿಯದೆ, ಅದರಾಚೆಗಿನ ಅಧಿಕಾರದ ಪರಿಕಲ್ಪನೆಯಾಗಿ ವ್ಯಾಖ್ಯೆಗೆ ಒಳಪಡುತ್ತದೆ'.[20]

'ಅತಿ ನಿಗ್ರಹದ ಮತಿ
ಇಲ್ಲವೇ, ಬಟಾಬಯಲ ಭ್ರಾತಿ
ದೇವರೇ ಗತಿ!
ಅನುನಯದ ಭ್ರಾಂತ ರೀತಿ
ಭದ್ರ ಉರಿವ ಸೂರ್ಯ
ಲಕ್ಷ ಮಿಂಚುಗಳ ಸೆರೆ
ಕಣ್ಣೊಳಗೆ ನೂರು ತಂತ್ರ
ಕಬ್ಬಿಣ ಯಂತ್ರ'[21] (ಆಹಾ, ಪುರುಷಾಕಾರಂ!)

ಈ ಕವಿತೆಯಲ್ಲಿ ಪುರುಷನ ಸೌಂದರ್ಯವನ್ನು ಪತಂಜಲಿಯ ಯೋಗ ಸೂತ್ರದ ಪ್ರಾರ್ಥನಾ ಶ್ಲೋಕದ ಒಂದು ಸಾಲನ್ನು ತೆಗೆದುಕೊಂಡು 'ಆಹಾ, ಪುರುಷಾಕಾರಂ! ಎಂದು ಉದ್ಗರಿಸುವ ಕವಿ ಮೊದಲ ಪದ್ಯದಲ್ಲಿ ಪುರುಷನ ಸೌಂದರ್ಯದ ಕಡೆ ಗಮನ ಸೆಳೆದು, ಮುಂದಿನ ಪದ್ಯದಲ್ಲಿ ಅವನಲ್ಲಿ ಅಡಗಿರುವ ಚಾಂಚಲ್ಯ, ದೌರ್ಬಲ್ಯಗಳನ್ನು ಸೂಚಿಸಿದ್ದಾರೆ. ಕೊನೆಗೆ ಸ್ತ್ರೀರೂಪಮೇ ರೂಪಂ. ನಿರ್ದಿಷ್ಟವಾಗಿ ಪ್ರಣಯಮತ್ತ ಸ್ತ್ರೀ...... ಎಂದಾಗ ಇದು ಅಪರೂಪವಾಗಿ ಕೇಳಿಬರುವ ಆತ್ಮವಿಶ್ವಾಸದ ಮಾತಾಗುತ್ತದೆ ಎನ್ನಬಹುದು.

'ಗಂಡು ಕಟ್ಟಿಕೊಡುವ ಪ್ರೇಮದ ಸಿದ್ಧಾಂತಗಳ ಬರ್ಬರತೆ ಮತ್ತು ಸ್ವಾರ್ಥಗಳು ಸ್ಪಷ್ಟವಾಗುವುದು, ವೈಭವೀಕೃತ ಪುರುಷ ಲೈಂಗಿಕತೆ ಮತ್ತು ದಮನಿತ ಸ್ತ್ರೀ ಲೈಂಗಿಕತೆಗಳ ನಿಜಗಳನ್ನು ಬಯಲಿಗೆ ತಂದಾಗ. ಪ್ರತಿಭಾ ಅವರ ಕಾವ್ಯವು ಪ್ರಾಯಶಃ ಕನ್ನಡದಲ್ಲಿ ಮೊದಲ ಬಾರಿಗೆ ಈ ಕೆಲಸವನ್ನು ಬಹಳ ಸಮರ್ಥವಾಗಿ ಮಾಡಿದೆ. (ಮತ್ತು ಅದರಿಂದಲೇ ನಿರ್ಲಕ್ಷಿತವೂ ಆಗಿದೆ)'[22]

ಪ್ರತಿಭಾ ಅವರ ಕವಿತೆಗಳಿಗೆ ಸಿಕ್ಕಿರುವ ಓದು ಕೂಡ ಇಂಥ ಅಲಕ್ಷ್ಯವುಂಟಾಗಲು ಕಾರಣವಿರಬಹುದು. ಉದಾಹರಣೆಗೆ 'ಅವರ ಕವಿತೆಗಳ ಪರಿಕರಗಳೆಲ್ಲ ಖಾಸಗಿ

ಪ್ರಪಂಚದ್ದಾದರೂ ಅದರ ಅಭಿವ್ಯಕ್ತಿ ಸಾರ್ವತ್ರಿಕ ನೆಲೆಯದು ಮಾತ್ರವಲ್ಲ, ಇಲ್ಲಿ ಅವರು ಉದ್ದೇಶಿಸಿದ ಹೆಣ್ಣಿನ ಪ್ರಪಂಚ ಮತ್ತು ಅವರು ದ್ವೇಷಿಸುವ ಗಂಡಿನ ಪ್ರಪಂಚ ನಿರಂತರವಾಗಿ ಮುಖಾಮುಖಿಯಾಗುತ್ತ ಹೋಗುತ್ತದೆ. ಸಂಘರ್ಷದ ಪ್ರಮಾಣ ಹೇಗೇ ಇರಲಿ ಫಲಿತಾಂಶ ಒಂದೇ, ಹೆಣ್ಣು ಸ್ವಾತಂತ್ರ್ಯಕ್ಕೆ ತುಡಿಯುತ್ತಾಳೆ. ಗಂಡು ಸ್ವಾರ್ಥಿಯಾಗಿ 'ಪುರುಷ ಮೃಗ'ವಾಗಿ ಲೇವಡಿಗೆ ಒಳಗಾಗುತ್ತಾನೆ'.[23] ಈ ಹೇಳಿಕೆಯಲ್ಲಿ ಪುರುಷಪರವಾದ ಏಕಪಕ್ಷೀಯ ನಿಲುವು ಕಾಣುತ್ತದೆ

ಈ ಹಿನ್ನೆಲೆಯಲ್ಲಿ ಪ್ರತಿಭಾ ಅವರ ಕವಿತೆಗಳು ಅನಾವರಣಗೊಳಿಸುವ ಕ್ರೌರ್ಯ ತುಂಬಿದ ಜಗತ್ತು ಬಹಳ ಅಪರೂಪವಾದುದೆಂದು ಹೇಳುತ್ತಾ ಎಚ್.ಎಸ್. ರಾಘವೇಂದ್ರರಾವ್ ಅವರು 'ಪ್ರತಿಭಾ ನಮಗೆಲ್ಲ ಆತ್ಮೀಯವಾಗುವುದು, ಮುಖ್ಯವಾಗುವುದು, ಈ ಕ್ರೌರ್ಯದ ಮುಖವನ್ನು ನಮ್ಮ ಮುಖಕ್ಕೆ ರಾಚುವಾಗಲೂ ಪ್ರೀತಿಯನ್ನೇ ಸ್ಥಾಯಿಯಾಗಿ ಹೊಂದಿರುವುದರಿಂದ ಈ ಭಾಷೆ ಕನ್ನಡಕ್ಕೆ ತೀರ ತೀರ ಅನನ್ಯವಾದದ್ದು. ಗಮನಿಸದೆ ಇರುವ ಗಂಡು ಗರ್ವಕ್ಕೆ ನಾಚಿಕೆ ಆಗಬೇಕು, ಆಗುವುದಿಲ್ಲ'[24] ಎಂದಿದ್ದಾರೆ. ಪ್ರತಿಭಾರ ಕಾವ್ಯ ಯಾವುದನ್ನು ಹೇಳಲು ಅನಿವಾರ್ಯವಾದ ಹಾದಿಯನ್ನು ಹಿಡಿದಿದೆಯೋ ಅದನ್ನು ಪುರುಷನ ಕುರಿತಾದ ದ್ವೇಷದಿಂದ ಬಂದದ್ದು ಎಂದು ಹೇಳಲಾಗುವುದಿಲ್ಲವೆನಿಸುತ್ತದೆ.

'ತಂದೆಯಾಗಿ, ಗಂಡನಾಗಿ, ಮಗನಾಗಿ, ಗೆಳೆಯನಾಗಿ....... ಹೀಗೆ ಹೆಣ್ಣಿನ ಬದುಕಿನ ಸಂಭ್ರಮದ ಘಳಿಗೆಗಳಿಗೆ ಕಾರಣವಾಗುವ ಇದೇ ಗಂಡಸರು ಯಾವ ಘಳಿಗೆಯಲ್ಲಿ ಬೇಕಾದರೂ 'ಅವರಾಗಿ' ಬಿಡುವ ಕ್ರೌರ್ಯವನ್ನು, ದುರಂತವನ್ನು ಬದುಕಿನ ಸಾಮಾನ್ಯ ಕ್ಷುದ್ರ ಎಂದು ಕರೆಯಬಹುದಾದ ವಿವರಗಳ ಮೂಲಕವೇ ಪ್ರತಿಭಾ ಸಂದೇಹಾತೀತವಾಗಿ ಪ್ರತಿಪಾದಿಸುತ್ತಾರೆ'.[25] ಆದರೆ 'ಈ ದುರಂತ ಕ್ರೌರ್ಯವನ್ನು ಗುರುತಿಸುವಾಗಲೂ ಅದು ಎಲ್ಲೂ ಪುರುಷ ದ್ವೇಷವಾಗಿ ಪರಿವರ್ತನೆಯಾಗುವುದಿಲ್ಲ ಮತ್ತು ಈ ಯಾವ ಸನ್ನಿವೇಶಗಳಲ್ಲೂ ಹೆಣ್ಣು ಅಸಹಾಯಕಳು ಎಂದೂ ಕಾಣಿಸುವುದಿಲ್ಲ. ಬದಲಿಗೆ ಗಂಡು ಹೆಣ್ಣನ್ನು ನಿಯಂತ್ರಿಸುವ, ಆಳುವ ಹೊಸದಾರಿಗಳ ಹುಡುಕಾಟದಲ್ಲಿ ಇರುವಂತೆಯೂ, ಆ ಅಧೀನ ಬದುಕಿನಿಂದ ಹೊರಬರಲು ಹೆಣ್ಣು ಧೀರೋದಾತ್ತವಾದ ಪ್ರಯತ್ನವನ್ನು ನಡೆಸುವವಳಂತೆಯೂ ಚಿತ್ರಿತವಾಗುತ್ತಾರೆ'.[26]

ಸ್ತ್ರೀಯರು ಸಾಹಿತ್ಯಿಕ ಚಟುವಟಿಕೆಗಳಲ್ಲಿ ತೊಡಗಿ ಉತ್ತಮವಾದುದನ್ನೇ ಸಾಧಿಸಿದರೂ ಅವರಿಗೆ ದೊರೆತಿರುವ ಮನ್ನಣೆಗಳ ಬಗೆಗೆ ಹಲವು ಅಧ್ಯಯನಗಳು

ಸ್ಪಷ್ಟಪಡಿಸಿವೆ. ತಿರುಮಲಾಂಬ ಹಾಗೂ ಇತರ ಲೇಖಕಿಯರು ಈ ಬಗೆಗೆ ಅಲಕ್ಷ್ಯಕ್ಕೆ ಒಳಗಾಗಿದ್ದನ್ನು ನೆನಪಿಸಿಕೊಳ್ಳಬಹುದು. ಸ್ತ್ರೀಯರು ರಚಿಸುವ ಸಾಹಿತ್ಯದ ಮೌಲ್ಯ ನಿರ್ಣಯ ಮಾಡುವಾಗ ಪ್ರಧಾನವಾಹಿನಿಯ ದೃಷ್ಟಿಕೋನವೇ ಮುಖ್ಯವಾಗುವುದರಿಂದ ಈ ಅಪಮೌಲ್ಯಗಳು ಸಂಭವಿಸಿವೆಯೆನ್ನಬಹುದು. ಪ್ರತಿಭಾ ಅವರು 'ಕನ್ನಡ ಕಾವ್ಯದಲ್ಲಿ ಏನಾದರೂ ಹೊಸದಾಗುತ್ತಿದ್ದರೆ ಅದು ಮಹಿಳೆಯರ ಕಾವ್ಯದಲ್ಲಿ ಮಾತ್ರ ಅಂತ ಹೇಳಲು ನನಗೇನೂ ಸಂಕೋಚವಾಗುತ್ತಿಲ್ಲ. ಯಾಕೆಂದರೆ ಅವರು ಇದುವರೆಗೆ ನೋಡದ ತಮ್ಮ ಅಂತರಂಗದ ಎಲ್ಲ ಸ್ತರಗಳನ್ನು ಹೊರಗೆಳೆದು ಎಳೆ ಎಳೆಯಾಗಿ ಬಿಡಿಸಿ ಇಡುತ್ತಿದ್ದಾರೆ. ಗಂಡಸರು ತಮ್ಮ ಸ್ತ್ರೀವಾದಿ ಅಕ್ಕ, ಹೆಂಡತಿ, ತಾಯಿಗೆ ಪ್ರತಿಕ್ರಿಯೆಯನ್ನು ಕೂಡಾ ತೋರುತ್ತಿಲ್ಲ. ಅವರ ಹಿರೋಯಿನ್‌ಗಳು ಇನ್ನೂ ಅದೇ ರೋಲ್ ಮಾಡೆಲ್‌ಗಳೇ'[27] ಎಂದು ಹೇಳಿರುವುದನ್ನು ಗುರುತಿಸಬಹುದು.

ಈ ಮಾತುಗಳು ಪ್ರಧಾನಧಾರೆಯ ವಿಮರ್ಶೆಯು ಮಹಿಳೆಯರ ಕಾವ್ಯ ಹೇಗಿರಬೇಕೆಂಬುದನ್ನು ಪರೋಕ್ಷವಾಗಿ ಅಂದರೆ ಮುನ್ನುಡಿಗಳಲ್ಲಿ ಹಾಗೂ ವಿಮರ್ಶೆಗಳಲ್ಲಿ ನಿರ್ದೇಶಿಸುತ್ತಿರುವುದನ್ನು ಕುರಿತು ಆಡಿರುವುವಾಗಿವೆ. ಹಲವು ವೈವಿಧ್ಯಗಳನ್ನು ಒಳಗೊಂಡು ಮಹಿಳೆಯರು ರಚಿಸುತ್ತಿರುವ ಸಮೃದ್ಧ ಬರವಣಿಗೆಗಳನ್ನು ಅಲಕ್ಷಿಸುತ್ತಿರುವ ಧೋರಣೆಯನ್ನು ಟೀಕಿಸುವಂತಹ ಕೆಲಸವನ್ನು ಈ ಹೇಳಿಕೆ ಮಾಡುತ್ತದೆ. ಸ್ತ್ರೀವಾದಿಗಳೆಂದರೆ ಪುರುಷದ್ವೇಷಿಗಳು, ಕುಟುಂಬ ವ್ಯವಸ್ಥೆಯನ್ನು ಒಡೆಯುವ ಮನೋಭಾವದವರೆಂದು ಭಾವಿಸುವುದನ್ನು ಹಾಗೂ ಕೆಲವು ನಿರ್ದಿಷ್ಟ ಗುಣಗಳುಳ್ಳ ಬರವಣಿಗೆಯನ್ನು 'ಸ್ತ್ರೀ ಸಹಜ', 'ಸ್ತ್ರೀತ್ವ' ಎಂಬ ವಿಶೇಷಣಗಳಿಂದ ಗುರುತಿಸುವುದು ಮುಂತಾದವನ್ನು ಇವರು ವಿರೋಧಿಸುತ್ತಾರೆನ್ನಬಹುದು. ಹಳೆಯ ಮಾದರಿಗಳನ್ನು ಬಿಟ್ಟು ಹೊಸತನವನ್ನು ಕಂಡುಕೊಳ್ಳುತ್ತಿರುವ ಮಹಿಳಾ ಕಾವ್ಯವನ್ನು ಅದರ ಬೆಳವಣಿಗೆಯನ್ನು ಗುರುತಿಸಲು ಹಿಂಜರಿಯುತ್ತಿರುವ ಪ್ರಧಾನಧಾರೆಯ ವಿಮರ್ಶೆಯ ರಾಜಕೀಯವನ್ನು ಈ ಹೇಳಿಕೆ ಬಹಿರಂಗಪಡಿಸುತ್ತದೆ.

ಹೆಣ್ಣೊಬ್ಬಳು ಪುರುಷ ಪ್ರಪಂಚಕ್ಕೆ ಅಪರಿಚಿತವಾದ ರೀತಿಯಲ್ಲಿ ಕವನ ಬರೆದರೆ ಅದರಿಂದ ಆಗುವ ಪರಿಣಾಮಗಳನ್ನು ಕುರಿತು ಪ್ರತಿಭಾ ಅವರು 'ಹೋಗಲಿ ಬಿಡಿ' ಕವನದಲ್ಲಿ, ಕವನದ ಅರ್ಥವನ್ನು ಕವಿಯ ವೈಯಕ್ತಿಕ ಜೀವನದಲ್ಲಿ ಹುಡುಕುವ ಪ್ರಯತ್ನ ಮಾಡುವುದನ್ನು ಕುರಿತು,

'ನನ್ನ ಅಡುಗೆಯ ರಹಸ್ಯದ ಹಾಗೆ
ನನ್ನ ಕವನಗಳೂ ಅವರಿಗೆ ನಿಗೂಢ
ಮೊಸರಿನಲ್ಲಿ ಕಲ್ಲು ಹುಡುಕುವ ಅವರು
ಬಳಸಿದ ಸಾಮಾನುಗಳ ಪತ್ತೆಗೆ
ತೊಡಗುತ್ತಾರೆ'[28] (ಹೋಗಲಿ ಬಿಡಿ)

ಎಂದು ಹೇಳುತ್ತಾರೆ. ಕವನವನ್ನು ಭಿನ್ನವಾದ ರೀತಿಯಲ್ಲಿ ಅಭಿವ್ಯಕ್ತಿಸಿದ್ದಕ್ಕಾಗಿ

'ಅವರ ಮಾತುಗಳ ಬಲೆಯಲ್ಲಿ
ನನ್ನ ವಿಧಿ ನಿರ್ಣಯವಾಗುತ್ತಿತ್ತು
ಹೊರಗೆ ಜಿಗಿದ ಅಪರಾಧಕ್ಕಾಗಿ
ನನಗೆ ಕಡಲಲ್ಲಿ ಮುಳುಗುವ
ಶಿಕ್ಷೆಯಾಯಿತು.
ಆದರೆ ತಿಮಿಂಗಲಗಳ ಕಟಕಟೆಯೇನೂ
ದುರ್ಬಲವಾಗಿರಲಿಲ್ಲ.
ಒಂದೇ ಸಮಾಧಾನವೆಂದರೆ
ನೆಲದ ಜನ
ಜಲದೊಳಗೆ ಬರುವುದಿಲ್ಲ'[29]

ವಿಶ್ವಾತ್ಮಕ ನೆಲೆಯಲ್ಲಿ ತನ್ನ ಕವನದ ಅಸ್ತಿತ್ವಕ್ಕೆ ಮಾನ್ಯತೆ ದೊರೆಯುವುದರಿಂದ ಆಕೆಗೆ ತನ್ನ ಪರಿಸರದಲ್ಲಿ ಅದು ಸಿಗದುದರ ಬಗೆಗೆ ವಿಷಾದವಿದೆ ಆದರೆ ನಿರಾಸೆಯಿಲ್ಲ. ಹೀಗೆ ತಮ್ಮ ಕವನಗಳ ಬಗೆಗೆ ಆತ್ಮವಿಶ್ವಾಸವಿರುವ ಕವಿ ಸಂವೇದನಾ ಶಕ್ತಿಯನ್ನು ಎಂದಿಗೂ ಕಳೆದುಕೊಳ್ಳದೆ ಬರೆಯುತ್ತಾರೆ. 'ಪ್ರತಿಭಾ ಅವರ ಕಾವ್ಯದ ಶಕ್ತಿಗೆ ಒಂದು ಕಾರಣವೆಂದರೆ ಇಂಥ ತಿಳುವಳಿಕೆಯೂ ಶಾಶ್ವತ ಜ್ಞಾನವಾಗಿ ಕಲ್ಪನಕ್ಕೆ ಕಾರಣವಾಗುವುದಿಲ್ಲ. ಒಂದು ವೇಳೆ ಹಾಗಿದ್ದರೆ ಬಹಳ ಪೆಡಸಾದ ಅಹಂಜನ್ಯ ಕಾವ್ಯ ಬರುತ್ತಿತ್ತು. ಆದರೆ ಈ ತಿಳುವಳಿಕೆಯ ಸ್ವಭಾವವೇ ಆರ್ದ್ರತೆಗೆ ಎರವಾಗದೆ ಇರುವುದು'.[30]

ಹೆಣ್ಣು ತನ್ನದೇ ಸ್ವತಂತ್ರ ಜೀವನವನ್ನು ಕಂಡುಕೊಳ್ಳಲು ಎದುರಿಸಬೇಕಾದ ಅಡ್ಡಿ ಆತಂಕಗಳು ಕಠಿಣವಾದವು. ಆದರೆ ಇಂತಹ ಸ್ಥಿತಿಯಲ್ಲೂ ತನಗಾಗಿ ಒಂದು ಅವಕಾಶವನ್ನು ತಾನೇ ನಿರ್ಮಾಣ ಮಾಡಿಕೊಳ್ಳಬೇಕಾದ ಅನಿವಾರ್ಯತೆ ಇದೆ. 'ಹೆಣ್ಣಿನ ಮಟ್ಟಿಗೆ ಸ್ಪೇಸ್ ದತ್ತವೂ ಇಲ್ಲ. ಸಿದ್ಧ ಲಭ್ಯವೂ ಅಲ್ಲ. ಅದು ಅಪಾರ ಶ್ರಮದ

ಗಳಿಕೆ. ಇದನ್ನು ಗಳಿಸಿಕೊಳ್ಳುವ ಸೃಷ್ಟಿಸಿಕೊಳ್ಳುವ ಅದಕ್ಕೆ ಅಧಿಕೃತತೆಯನ್ನು, ಲಭ್ಯತೆಯನ್ನು ಪಡೆದುಕೊಳ್ಳಬೇಕೆನ್ನುವ ಮಹತ್ವಾಕಾಂಕ್ಷೆ ಪ್ರತಿಭಾ ಕಾವ್ಯದ ಸ್ಥಾಯೀಭಾವ ಎಂದರೂ ನಡೆಯುತ್ತದೆ. ಇದನ್ನು ಗಳಿಸುವ ಕಷ್ಟಗಳೆಲ್ಲವು ಇವರ ಕಾವ್ಯದಲ್ಲಿ ದಾಖಲಾಗಿವೆ'.[31]

ಪ್ರತಿಭಾ ಅವರ ಕಾವ್ಯದಲ್ಲಿ ಸ್ತ್ರೀವಾದಿ ಅಂಶಗಳನ್ನು ಗುರುತಿಸುವಾಗ ನಾವು ಗುರುತಿಸಬಹುದಾದ ಸ್ತ್ರೀವಾದದ ಲಕ್ಷಣವು ವಿಶಿಷ್ಟವಾದುದು. 'ಸ್ತ್ರೀವಾದದ ಒಳಗೆ ಸ್ವಾತಂತ್ರ್ಯವೆಂಬುದು ಪ್ರಪಂಚದ ಸ್ತ್ರೀಕರಣ. ಇದು ಹೆಣ್ಣು ಮತ್ತು ಗಂಡಿನ ನಡುವಿನ ಮಾನಸಿಕ ಮತ್ತು ದೈಹಿಕ ಲಿಂಗ ತತ್ತ್ವದ ದ್ವಂದ್ವ ಮತ್ತು ಬೇರ್ಪಡಿಸುವಿಕೆಗಿಂತ ಭಿನ್ನವಾದದ್ದು ಮಾತ್ರವಲ್ಲ. ಹೆಚ್ಚು ರಾಜಕೀಯ ಮತ್ತು ಸಾಂಸ್ಕೃತಿಕ ವೈರುಧ್ಯತೆಗಳ ಸೃಷ್ಟಿಯಾಗಿದೆ. ಸ್ತ್ರೀವಾದದಲ್ಲಿ ಸ್ವಾತಂತ್ರ್ಯದ ಮೂರನೇ ತತ್ತ್ವ ಹಾಗೂ ಪ್ರಕ್ರಿಯೊಂದಿದೆ. ಅದು ಲಿಂಗಭೇದವಿಲ್ಲದ ಹಾದಿ. ಪೌರುಷತ್ವ ಮತ್ತು ಸ್ತ್ರೀತ್ವ ಇವರೆಡೂ ಒಂದು ಇನ್ನೊಂದನ್ನು ಹೊರತಾಗಿಸುವ, ಅಭಿನ್ನವಾಗಿ ವಿವರಿಸಲಾದ ತತ್ತ್ವಗಳು. ಲಿಂಗರಹಿತ ತತ್ತ್ವದ ಒಳಗೆ ಸ್ತ್ರೀತ್ವವು ಸ್ತ್ರೀಯರಲ್ಲಿ ಮಾತ್ರ ಇರುವುದಿಲ್ಲ. ಅದು ಪ್ರಕೃತಿಯಲ್ಲಿ ಪುರುಷ ಮತ್ತು ಸ್ತ್ರೀಯರಲ್ಲಿ ಇರುವ ಚಟುವಟಿಕೆ ಮತ್ತು ಕ್ರಿಯಾಶೀಲತೆಯ ತತ್ತ್ವ ಅದು ಸೃಷ್ಟಿಸುವ ನವಸಂಪೂರ್ಣತೆಯು ಲಿಂಗತ್ವವನ್ನು ದಾಟಿ ನಿಲ್ಲಬಲ್ಲುದು ಎಂಬುದು'.[32]

**ಅಡಿಟಿಪ್ಪಣಿ:**

1. ಡಾ॥ ಎಂ.ಎಸ್.ಆಶಾದೇವಿ, ಲೇಖನ: ಮರೆಯಬಾರದ ಕೊಡಗಿನ ಗೌರಮ್ಮ, 'ಅಚಲ' ಮಾಸ ಪತ್ರಿಕೆ, ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ ಪ್ರಕಾಶನ, ಸಂಚಿಕೆ : ಮೇ 2007, ಪುಟ 7, 8.
2. ಡಾ॥ ಕೆ. ಕೇಶವ ಶರ್ಮ, ಕ್ರಿಯೆ ಪ್ರತಿಕ್ರಿಯೆ, ಚಿಂತನ ಕೂಟ ಪ್ರಕಾಶಾನ, ಬೆಂಗಳೂರು, 1998, ಪುಟ 78
3. ಎಚ್.ಎಸ್. ರಾಘವೇಂದ್ರರಾವ್, ಮುನ್ನುಡಿ ಬೆನ್ನುಡಿಗಳ ನಡುವೆ (ಮುನ್ನುಡಿ) ಮಹಿಳಾ ಸಾಹಿತ್ಯಿಕ ಪ್ರಕಾಶನ, ಹುಬ್ಬಳ್ಳಿ 2006, ಪುಟ 25.
4. ಡಾ॥ ಎಂ.ಎಸ್. ಆಶಾದೇವಿ, ಲೇಖನ: ತಾತ್ವಿಕ ನೆಲೆಯ ಹುಡುಕಾಟದಲ್ಲಿ, ಸಂಚಯ ಪತ್ರಿಕೆ, ಸಂಪುಟ 15, ಸಂಚಿಕೆ 3(72), ನವೆಂಬರ್ 2006 ಪುಟ 42.
5. ಎಚ್.ಎಸ್. ರಾಘವೇಂದ್ರರಾವ್, ಪೂರ್ವೋಕ್ತ, ಪುಟ 10.
6. ಪ್ರತಿಭಾ ನಂದಕುಮಾರ್, ಮುನ್ನುಡಿ ಬೆನ್ನುಡಿಗಳ ನಡುವೆ (ಸಮಗ್ರ ಕವನ ಸಂಕಲನ) ಮಹಿಳಾ ಸಾಹಿತ್ಯಿಕ ಪ್ರಕಾಶನ, ನವನಗರ, ಹುಬ್ಬಳ್ಳಿ, 2006 ಪುಟ 362.
7. ಅದೇ. ಪುಟ 363
8. ಅದೇ. ಪುಟ 364
9. ಪ್ರತಿಭಾ ನಂದಕುಮಾರ್, 'ಮುನ್ನುಡಿ ಬೆನ್ನುಡಿಗಳ ನಡುವೆ', ಪೂರ್ವೋಕ್ತ, ಪುಟ 365.
10. ಅದೇ. ಪುಟ 367
11. ಅದೇ. ಪುಟ 368
12. ಪ್ರತಿಭಾ ನಂದಕುಮಾರ್, ಲೇಖನ : 'ಕೆಲವು ಅಡ್ಡಾದಿಡ್ಡಿ ಚಿಂತನೆಗಳು', ಸಂಚಯ ತ್ರೈಮಾಸಿಕ ಪತ್ರಿಕೆ, ಪೂರ್ವೋಕ್ತ, ಪುಟ 46.
13. ಡಾ॥ ಕೆ.ಕೇಶವಶರ್ಮ, ಲೇಖನ: 'ಬೇರೊಂದು ಕೋನದಲ್ಲಿ ಚರಿತ್ರೆ', 'ಮಯೂರ', ಡಿಸೆಂಬರ್, 2006, ಪುಟ 46.
14. ಪ್ರತಿಭಾ ನಂದಕುಮಾರ್, ಮುನ್ನುಡಿ ಬೆನ್ನುಡಿಗಳ ನಡುವೆ, ಪೂರ್ವೋಕ್ತ, ಪುಟ 389.
15. ಅದೇ. ಪುಟ 475
16. ಬಿ.ಎನ್. ಸುಮಿತ್ರಾಬಾಯಿ, 'ವಿಚಯ'ದಲ್ಲಿ ಉದ್ಧೃ ತ, ಇಳಾ ಪ್ರಕಾಶನ, ಬೆಂಗಳೂರು 1995, ಪುಟ 12.

17. ಡಾ॥ ಕೆ. ಕೇಶವಶರ್ಮ, ಲೇಖನ: 'ಬೇರೊಂದು ಕೋನದಲ್ಲಿ ಚರಿತ್ರೆ', ಮಯೂರ ಮಾಸಪತ್ರಿಕೆ, ಡಿಸೆಂಬರ್ 2006, ಪುಟ 48.

18. ಪ್ರತಿಭಾ ನಂದಕುಮಾರ್, 'ಮುನ್ನುಡಿ ಬೆನ್ನುಡಿಗಳ ನಡುವೆ', ಪೂರ್ವೋಕ್ತ, ಪುಟ 453.

19. ಡಾ॥ ಕವಿತಾ ರೈ .ಬಿ.ಆರ್., ಲೇಖನ: 'ಪ್ರತಿಭಾ ಕಾವ್ಯ : ಒಂದು ಮರು ಓದು', ಸಂಚಯ ಪತ್ರಿಕೆ, ಪೂರ್ವೋಕ್ತ, ಪುಟ 49.

20. ಡಾ॥ ಕೆ. ಕೇಶವಶರ್ಮ, ಲೇಖನ: ಬೇರೊಂದು ಕೋನದಲ್ಲಿ ಚರಿತ್ರೆ, ಪೂರ್ವೋಕ್ತ, ಪುಟ 47.

21. ಪ್ರತಿಭಾ ನಂದಕುಮಾರ್, 'ಮುನ್ನುಡಿ ಬೆನ್ನುಡಿಗಳ ನಡುವೆ', ಪೂರ್ವೋಕ್ತ, ಪುಟ 361.

22. ಎಚ್.ಎಸ್. ರಾಘವೇಂದ್ರರಾವ್, 'ಮುನ್ನುಡಿ ಬೆನ್ನುಡಿಗಳ ನಡುವೆ' (ಮುನ್ನುಡಿ), ಪೂರ್ವೋಕ್ತ, ಪುಟ 19.

23. ಎನ್.ಎಸ್. ಶ್ರೀಧರಮೂರ್ತಿ, ಲೇಖನ: 'ಪ್ರತಿಭಾ ನಂದಕುಮಾರ್ ಕಾವ್ಯದ ಓದಿನ ಜೊತೆಗೆ ಒಂದಿಷ್ಟು ಪ್ರಶ್ನೆಗಳು' 'ಸಂಚಯ' ಪತ್ರಿಕೆ, ಪೂರ್ವೋಕ್ತ, ಪುಟ 60.

24. ಎಚ್.ಎಸ್. ರಾಘವೇಂದ್ರರಾವ್, ಪೂರ್ವೋಕ್ತ ಪುಟ:23

25. ಡಾ॥ ಎಂ.ಎಸ್.ಆಶಾದೇವಿ, 'ತಾತ್ವಿಕ ನೆಲೆಯ ಹುಡುಕಾಟದಲ್ಲಿ', 'ಸಂಚಯ' ಪತ್ರಿಕೆ, ಪೂರ್ವೋಕ್ತ, ಪುಟ 42

26. ಅದೇ. ಪುಟ:42

27. ಪ್ರತಿಭಾ ನಂದಕುಮಾರ್, 'ಕವಿತೆಗೆ ಕಾರಣ', ಆಹಾ, ಪುರುಷಾಕಾರಂ!, ಕವನ ಸಂಕಲನ, ನೆಲಮನೆ ಪ್ರಕಾಶನ, ಶ್ರೀರಂಗಪಟ್ಟಣ, 2000 ಪುಟ 6.

28. ಪ್ರತಿಭಾ ನಂದಕುಮಾರ್. ಮುನ್ನುಡಿ ಬೆನ್ನುಡಿಗಳ ನಡುವೆ, ಪೂರ್ವೋಕ್ತ, ಪುಟ 423.

29. ಅದೇ.

30. ಎಚ್.ಎಸ್. ರಾಘವೇಂದ್ರರಾವ್, ಪೂರ್ವೋಕ್ತ, ಪುಟ 21

31. ಡಾ॥ ಎಂ.ಎಸ್. ಆಶಾದೇವಿ, ಲೇಖನ: ತಾತ್ವಿಕ ನೆಲೆಯ ಹುಡುಕಾಟದಲ್ಲಿ ಸಂಚಯ ಪತ್ರಿಕೆ, ಪೂರ್ವೋಕ್ತ, ಪುಟ 47.

32. ಡಾ॥ ಕವಿತಾ ರೈ .ಬಿ.ಆರ್., ಲೇಖನ: 'ಪ್ರತಿಭಾ ಕಾವ್ಯ: ಒಂದು ಮರು ಓದು' ಸಂಚಯ ಪತ್ರಿಕೆ, ಪೂರ್ವೋಕ್ತ, ಪುಟ 50.

## ಅಧ್ಯಾಯ – 5

# ಪ್ರತಿಭಾ ಅವರ ಕಾವ್ಯದ ಅಭಿವ್ಯಕ್ತಿ ವಿಧಾನ

ಪ್ರತಿಭಾ ಅವರ ಕಾವ್ಯವನ್ನು ಗಮನಿಸಿದಾಗ, ಅವರ ಹಲವಾರು ಕವನಗಳು ಯಾವುದಾದರೊಂದು ಸಂಗತಿಯ ನಿರಾಕರಣೆಯಿಂದಲೇ ಆರಂಭವಾಗುವುದನ್ನು ಕಾಣಬಹುದು. ಅದು ಹಳೆಯ ಕವಿಗಳ ಕವಿತೆಗಳ ಆಶಯದ ಬಗೆಗಿರಬಹುದು, ಅಥವಾ ಆಧುನಿಕ ಕವಿತೆಗಳ ಆಶಯವಿರಬಹುದು ಅಥವಾ ಯಾವುದೇ ಕ್ಷುದ್ರ ಎನ್ನಿಸುವಂತಹ ವಸ್ತು ವಿವರಗಳಿರಬಹುದು, ಅಲ್ಲೆಲ್ಲ ನಿರಾಕರಣೆ ಸಾಮಾನ್ಯವಾಗಿ ಕಂಡುಬರುತ್ತದೆ. ಮೊದಲ ಕವನಸಂಕಲನಗಳಲ್ಲಿ ಈ ಅಂಶ ಕಂಡು ಬರದಿದ್ದರೂ ಅವರು ಅತ್ಯಂತ ಪ್ರಬುದ್ಧವಾಗಿ, ಗಂಭೀರವಾಗಿ ಬರೆದಿರುವ ಕವಿತೆಗಳಲ್ಲಿ ಇದನ್ನು ಕಾಣಬಹುದು. 'ಅವಳು–ಇವಳು', 'ಹಿಮದ ಹಾದಿ', 'ಹೆಣ್ಣು–ಕಾಡು', 'ನನ್ನ ಕಾರ್ಗಿಲ್', 'ಸಾಧ್ಯವೇ ಇಲ್ಲ, ಒಂದು ಹೆಂಗಸಿನ ಜೊತೆ ನಾನು ಇಂಥಾ ಗಂಭೀರ ವಿಷಯ ಚರ್ಚಿಸುತ್ತೇನೆಯೇ?' ಎಂದ ಗಂಡಸಿಗೆ' ಇನ್ನು ಮುಂತಾದ ಕವಿತೆಗಳು ಆರಂಭವಾಗುವುದೇ 'ಇಲ್ಲ', 'ಅಲ್ಲ' ಗಳಂತಹ ನಿರಾಕರಣೆಯ ಪದಗಳಿರುವ ಸಾಲುಗಳಿಂದ. ಈ ಅಂಶವನ್ನು ಗುರುತಿಸುತ್ತಾ ಎಚ್.ಎಸ್.ರಾಘವೇಂದ್ರ ರಾವ್‌ರವರು 'ಅವರು ಸಮಾಜವು ರಚಿಸಿರುವ ಹೆಣ್ಣನ್ನು ನಿರಾಕರಿಸಿ ಅಥವಾ ಹೆಣ್ಣನ್ನು ಸಮಾಜವು ಕನ್ಸ್‌ಟ್ರಕ್ಟ್ ಮಾಡಿದೆ ಎಂಬ ನಿಲುವನ್ನು ಅಲ್ಲಗಳೆದು ನಿಜವಾದ ಹೆಣ್ಣನ್ನು ಅನಾವರಣ ಮಾಡುವ ಪ್ರಯತ್ನದಲ್ಲಿ ತೊಡಗಿದ್ದಾರೆ. ಈ ಹೆಣ್ಣು ಯಾವುದೇ ಅರ್ಥದಲ್ಲಿ ಗಂಡಿಗೆ ಸಮಾನಗಳಾಗಿ ಉಳಿಯದೆ, ಅವನಿಗಿಂತ ಭಿನ್ನವಾದ ಮತ್ತು ಉತ್ತಮವಾದ ಲಕ್ಷಣಗಳನ್ನು ಹೊಂದುತ್ತಾಳೆ. ಕೇವಲ ಕುಟುಂಬದ ಪೋಷಕಿಯಾಗಿ ಅಲ್ಲ, ಅದನ್ನು ಮೀರಿದ ಸ್ವತಂತ್ರ ಅಸ್ತಿತ್ವವಾಗಿ'[1] ಎಂದಿದ್ದಾರೆ.

ಹೆಣ್ಣನ್ನು, ಆವರಿಸಿರುವ ಸಾಮಾಜಿಕ ಪರಿಸರವನ್ನು ಆದಷ್ಟು ಬಿಚ್ಚಿಯೇ ನೋಡುವ ಕ್ರಮ ಇವರದಾಗಿದೆ. ಅತ್ಯಂತ ಖಾಸಗಿ ನೆಲೆಯಿಂದ ತನ್ನ ವೈಯಕ್ತಿಕ ಸಂಬಂಧಗಳನ್ನು, ಆಗುಹೋಗುಗಳನ್ನು ಪರಿಶೀಲಿಸುವ ಇವರಿಗೆ ಭಾಷೆಯನ್ನು ತಮ್ಮದೇ ರೀತಿಯಲ್ಲಿ ಬಳಸುವುದು ಅನಿವಾರ್ಯವಾಗಿದೆ. 'ಎಲ್ಲರಿಗೂ ಸಲ್ಲಬಲ್ಲ ಸಾರ್ವತ್ರಿಕ ಅನುಭವವನ್ನು ಹೇಳಬೇಕಾದರೆ, ಅತ್ಯಂತ ಖಾಸಗಿಯಾದುದನ್ನು ನಿರ್ಭಿಡೆಯಾಗಿ ಹೇಳದೆ ವಿಧಿಯಲ್ಲ. ಇಲ್ಲಿ ಖಾಸಗಿ ಎಂದರೆ ಸ್ವಂತ ಎಂದು ಅರ್ಥವಲ್ಲ. ಇದುವರೆಗೆ ಕವಿತೆಯಾಗದ, ಹಿಂಜರಿಕೆಯಿಂದ ಹೇಳದೆ ಉಳಿದ ಲೋಕಗಳ ಅನಾವರಣ ಎಂದೇ ಅರ್ಥ'.[2]

ಪ್ರತಿಭಾ ಅವರ ಕಾವ್ಯದಲ್ಲಿ ಲಯ ನೂರಾರು ವಿನ್ಯಾಸಗಳಲ್ಲಿ ಶಕ್ತಿಯುತವಾಗಿ ಕಾಣಿಸಿಕೊಳ್ಳುತ್ತದೆ. 'ಪ್ರತಿಮೆಯಿರಲಿ, ಪ್ರತ್ಯಕ್ಷವಿರಲಿ, ಹಿಂಸೆಯಿರಲಿ, ಮೃದುಕೋಮಲ ಭಾವಗಳಿರಲಿ, ಪ್ರತಿಭಾ ಕನ್ನಡ ಕಾವ್ಯ ಭಾಷೆಯನ್ನು ಬಹಳ ಸಮರ್ಥವಾಗಿ ಬಳಸಿಕೊಂಡಿದ್ದಾರೆ. ನಿಯತಲಯಗಳ ಆಕರ್ಷಣೆಗೆ, ಅವುಗಳ ಸಂಗಡವೇ ಬರುವ, ಆಲೋಚನೆಗೆ ಅವಕಾಶ ಕೊಡದ ಯಾಂತ್ರಿಕ ಬಂಧನಕ್ಕೆ ಅವರು ಒಳಗಾಗುವುದಿಲ್ಲ'.[3]

ಪ್ರತಿಭಾ ಅವರ ಬಹುತೇಕ ಕವಿತೆಗಳು ಕನ್ನಡದ ಹಳೆಯ ಕವಿಗಳ ಕವಿತೆಗಳ ಲಯಗಳನ್ನು ನೆನಪಿಸುವ ಮಾದರಿಯಲ್ಲಿ ಆರಂಭವಾಗುತ್ತವೆ. ಹೀಗೆ ಆರಂಭವಾದರೂ ಆ ಸಾಲುಗಳಲ್ಲಿಯೇ ಬದಲಾವಣೆ ಮಾಡಿಕೊಂಡು ಮುಂದುವರಿಯುವ ಇವರು ಯಾವುದಾದರೂ ಒಂದು ಮೌಲ್ಯದ ಇಲ್ಲವೆ ಸಂಗತಿಯನ್ನು ಪ್ರಶ್ನಿಸುವ, ವ್ಯಂಗ್ಯಕ್ಕೆ ಒಳಪಡಿಸುವ, ಲೇವಡಿ ಮಾಡುವ ಮೂಲಕ ತಮ್ಮದೇ ಒಂದು ಸ್ಪರ್ಶವನ್ನು ಕವಿತೆಗೆ ನೀಡುತ್ತಾರೆ. ಹೀಗೆ ಹೊಸ ರೀತಿಯಲ್ಲಿ ಅನುಭವವೊಂದನ್ನು ಓದುಗರ ಮುಂದಿಡುತ್ತಾರೆ.

'ಅಯ್ಯಾ ಎಲವೋಗಳ
ಸ್ವರ್ಗ ನರಕಗಳ
ಕರ್ತಾರನ ಕಮ್ಮಟಕ್ಕೆ
ಉಫೇ ಎಂದೆ

ಅಂಗ ಸುಖ ಲಿಂಗ ಸುಖಗಳ
ಕಳವಳವ ಕಳೆದ ಅಕ್ಕಗಳ
ಅಡಿಗೆರಗಿ ಉಧೋ ಎಂದೆ
ಮಾಯೆ ಗೆಲಿದವರ ಶಿರಕ್ಕೆ ನಮಿಸಿ
ಕೊರಳಾಣೆ ಯೂ ಆರ್ ಗ್ರೇಟ್ ಗ್ರೇಟ್ ಎಂದೆ'.[4]

(ನಾನು ಬ್ರಾಹ್ಮಣ ಕನ್ಯೆ)

ಈ ಸಾಲುಗಳಲ್ಲಿ ಬಸವಣ್ಣ, ಅಕ್ಕನ ವಚನಗಳ ಸಾಲುಗಳನ್ನು ನೆನಪಿಸುತ್ತಲೇ ಹೆಣ್ಣು ಜಾತಿಯ ವಿಷಯದಲ್ಲಿ ಕಟ್ಟಳೆಗಳನ್ನು ಮುರಿಯಲು ಸಿದ್ಧವಿರುವಂತೆಯೂ, ಗಂಡು ತನ್ನ ಪರಿಧಿ ದಾಟಲು ಸುಲಭವಾಗಿ ಒಪ್ಪದಿರುವ ಬಗೆ ಇಲ್ಲಿ ಕಾಣುತ್ತದೆ. ಜಾತಿಯ ಬಗೆಗೆ ಎಚ್ಚರ ಮೂಡಿದ ಕ್ಷಣದಿಂದಲೇ ಗಂಡು ತನ್ನವರ ಜೊತೆ ನಿಲ್ಲುತ್ತಾನೆ.

'ಕಣ್ಣು ಬಿಟ್ಟಾಗ ನೀನು ಶಪಿಸುವೆ
ನಿನಗೆ ನಿನ್ನ ವ್ರತವೇ ಪ್ರಧಾನ
ಶಪಿತೆ ನಾನು
ಯುಕ್ತ ಕಾಲಕ್ಕೆ ಎಲ್ಲ ಮರೆವೆ
ನನಗೆ ನನ್ನ ಭ್ರಮೆಯೂ ಗೌಣ
ಬುದ್ಧಿ ನೀನು, ಭಾವ ನಾನು
ವಿದ್ಯುದಾಗಲಿಂಗವೆಲ್ಲ ಬರಿ ಸುಳ್ಳು'[5]

ಎಂದು ಸೃಷ್ಟಿಕ್ರಿಯೆಯ ಬಗೆಗೆ ಸಾಮಾನ್ಯವಾಗಿ 'ಬುದ್ಧಿ ಭಾವಗಳ ವಿದ್ಯುದಾಲಿಂಗನ' ಎಂದು ವಿವರಿಸುವ ಕ್ರಮವನ್ನು ವಿರುದ್ಧ ನೆಲೆಯಲ್ಲಿಡುವುದರ ಮೂಲಕ ವಾಸ್ತವದ ಅರಿವನ್ನು ಮೂಡಿಸುತ್ತಾರೆ.

'ಎಲ್ಲಿದ್ದೀಯೆ ನೈನಾ
ಇಲ್ಲೇ ಇದ್ದೀನಪ್ಪಾ
ಕಾಟ್ ಕಾಂಡೋಮ್ ಕ್ಯಾರಿಬ್ಯಾಗ್
ಇಲ್ಲೇ ಇವೆಯಪ್ಪಾ

ಊಟಕ್ಕೇನೇ ನೈನಾ
ರೊಟ್ಟಿ ತಂದೆಯೇನೇ
ಬೇಯ್ತಾ ಇದ್ದೀನಪ್ಪ
ಶರ್ಮಾ ತರ್ತಾನಪ್ಪಾ'[6] (ನೈನಾ-ಸಾಹ್ನಿ)

ಇಲ್ಲಿ ಪುರುಷ ಪ್ರಧಾನ ವ್ಯವಸ್ಥೆಯು ಪೋಷಕ ಸ್ಥಾನದಲ್ಲಿ ಇರಿಸಿರುವ ತಂದೆಯೇ ಈ ಮೌಲ್ಯವನ್ನು ಬುಡಮೇಲು ಮಾಡಿರುವುದನ್ನು ತಾಯಿ-ಮಗಳ ಅಗಲುವಿಕೆಯಲ್ಲಿ ಮಗಳ ಅಂತರಂಗದ ವೇದನೆಯನ್ನು ಮನಸ್ಸಿಗೆ ಮುಟ್ಟುವಂತೆ ಭಾವಸಂಬಂಧಿಯಾಗಿ ಚಿತ್ರಿಸುವ ಜನಪ್ರಿಯ ಕವಿತೆಯನ್ನು ನೆನಪಿಸುತ್ತಲೇ ಈ ಕವಿತೆ ಇಂತಹ ಸಂಬಂಧಗಳಲ್ಲಿರುವ ದುರಂತವನ್ನು ಸೂಚಿಸುತ್ತದೆ.

ಕ್ಷುದ್ರ, ಕ್ರೂರ, ದುರ್ಬಲ ಪ್ರಾಣಿಗಳ ಪ್ರತೀಕಗಳನ್ನು ಬಳಸಿ ಹಲವು ರೀತಿಯಲ್ಲಿ ಹೆಣ್ಣು ಗಂಡಿನ ಸಂಬಂಧಗಳನ್ನು ಗುರುತಿಸುತ್ತಾರೆ. ಹೆಣ್ಣು ಹುಲಿ ಕವಿತೆಯಲ್ಲಿ

ಗಂಡಿನ ಸನ್ನೆಗೆ ತಕ್ಕಂತೆ ನಡೆಯಬೇಕಾಗಿರುವ ಹೆಣ್ಣಿನ ಸ್ಥಿತಿಯನ್ನು ಸರ್ಕಸ್ಸಿನ ಹುಲಿಯ ನಡವಳಿಕೆಯ ಮೂಲಕ ಸೂಚಿಸಿದ್ದಾರೆ.

'ಅಂಡಲೆಯುತ್ತಿದ್ದ ಹೆಣ್ಣು ಹುಲಿ
ಈಗ ಅವನು ಹೇಳಿದ ಹಾಗೆ ಕೇಳುತ್ತದೆ.
ಇಲಿಯಂತೆ ಬಾಲ ಮುದುರಿಕೊಳ್ಳುತ್ತದೆ.
ಯಾರೋ ಒಂದು ಸಲ ಈ ಬಗ್ಗೆ
ಪ್ರಶ್ನಿಸಿದಾಗ ಸುಮ್ಮನೇ ನಕ್ಕು
ಪಂಜದೊಳಗೆ ಅಡಗಿಸಿಟ್ಟ ನಖಗಳನ್ನು
ಹೊರತೆಗೆದು ತಲೆ ಕೆರೆದುಕೊಂಡಿತು'[7] (ಹೆಣ್ಣು ಹುಲಿ)

ಹುಲಿಗೆ ಬಲವಿದ್ದೂ ಅದನ್ನು ತೋರಲಾರದ ಸನ್ನಿವೇಶದಲ್ಲಿ ಇರುವುದು ಹೆಣ್ಣು ವ್ಯವಸ್ಥೆಯಲ್ಲಿ ಬಂಧಿಯಾಗಿರುವುದನ್ನು, ಗಂಡು ಅದನ್ನು ಸರಿಯಾಗಿ ಬಳಸುವುದನ್ನು ಇದು ಸೂಚಿಸುತ್ತದೆ.

'ಎಲ್ಲಿದ್ದೆ'? ಕವನದಲ್ಲಿ 'ಮುದ್ದು ಬೆಕ್ಕಿನ ಮರಿ', 'ರೇಷ್ಮೆಗೂಡು'ಗಳಂತಹ ಜೀವಗಳು ಅಮಾನುಷವಾಗಿ ಸಾವನ್ನಪ್ಪುವ ಚಿತ್ರಗಳನ್ನು ನೀಡುತ್ತಾ

'ಸಾವಿರದ ಕರುಣೆ ತೋರುವ ಪ್ರಭುವೇ
ಸಾವಯುವ ನಿರವಯುವಗಳ ನಡುವೆ ಬಿಕ್ಕುವ
ಹುಡುಗಿ ಹೊರಳುವಾಗ ನೀನೆಲ್ಲಿದ್ದೆ?
ಸಂಗ ಸುಖವದು ಬಲು
ದುಃಖ ಎಂದಳಲುತ್ತಿದ್ದೆಯಾ?
ಪ್ರತಿಮೆಗಳಲ್ಲಿ ಬರೆದರೆ ತಿಳಿಯುವುದಿಲ್ಲವಂತೆ
ನೇರವಾಗಿ ಬಿಚ್ಚಿಕೊಂಡರೆ ಅರ್ಥವಾಗುವುದಂತೆ
ಬಿಚ್ಚಿ ಬಿಚ್ಚಿದಾಗ ನೀನು ಎಲ್ಲಿ ಬಚ್ಚಿಟ್ಟುಕೊಂಡಿದ್ದೆ?'[8] (ಎಲ್ಲಿದ್ದೆ?)

ಎಂಬ ಪ್ರಶ್ನೆಯನ್ನು ಹಾಕುತ್ತಾರೆ. ಮುಗ್ಧ ಜೀವವೊಂದು ಅನ್ಯಾಯವಾಗಿ ಸಾವನ್ನಪ್ಪುವಾಗ ಕರುಣೆ ತೋರದವರು, ಈ ದುರಂತ ನಡೆದ ನಂತರ ಬಂದು ಅದರ ಬಗ್ಗೆ ಕೇಳುವವರಿಗೆ ತನ್ನ ಅಳಲನ್ನು ಹೇಳಿಕೊಂಡಾಗ ಎಲ್ಲಿದ್ದಿರಿ ನೀವು ಎಂದು ಪ್ರಶ್ನಿಸುವ ಬಗೆ ಮಾರ್ಮಿಕವಾಗಿದೆ.

ಪ್ರತಿಭಾ ಅವರ ಕವಿತೆಗಳಲ್ಲಿ ಕವನಗಳ ಬಗೆಗೆ ಹಲವಾರು ಕವನಗಳಿವೆ. ಕವನ ಹುಟ್ಟುವಾಗಿನ ಸಂದರ್ಭದ ಕಷ್ಟಗಳನ್ನು, ತೊಡಕುಗಳನ್ನು ಇವು ವಿವರಿಸುತ್ತವೆ. ಕಥೆಗೂ ಕವಿತೆಗೂ ಇರುವ ಸಂಬಂಧವನ್ನು ಕವಿತೆ, ಕವಿತೆ-1, ವಿವರಿಸುತ್ತದೆ. 'ಕಥೆಗೆ ಬರೆ ಬಿದ್ದರೆ, ಪಾಪ ಕವಿತೆಗೆ ಜ್ವರ', ಕಥೆಯ ಸಂಕ್ಷಿಪ್ತ ರೂಪವೇ ಕವಿತೆ ಎಂಬುದನ್ನು ಕವಿತೆ-2 ಕವಿತೆಯು ಸೂಚಿಸುತ್ತದೆ. ಮುಂದುವರಿದು ಕವಿತೆಯೊಂದು ತನ್ನ ಅಸ್ತಿತ್ವವನ್ನು ಕಾಯ್ದುಕೊಳ್ಳಲು ತೆರಬೇಕಾದ ಬೆಲೆಯನ್ನು 'ಕೊಟ್ಟರೆ ಕೊರಳು, ಬಿಟ್ಟರೆ ಉಸಿರು' ಎಂದು ಅದರ ಅಪಾಯವನ್ನು ಇಲ್ಲಿಯೇ ಗುರುತಿಸಿದ್ದಾರೆ. ಕವಿತೆಯ ಗೀಳನ್ನು ಕುರಿತು, ಕವಿತೆಯನ್ನು ಅನಿವಾರ್ಯತೆಯಿಂದ ಬರೆದರೆ, ಆ ಕವಿತೆ ಮತ್ತಷ್ಟು ಹಂಬಲವನ್ನು ಹುಟ್ಟಿಸುವ ಮತ್ತಷ್ಟು ಕವಿತೆಗಳನ್ನು ಬರೆಯಲು ಕಾರಣವಾಗುತ್ತವೆ ಎಂಬ ಸಂಗತಿಯನ್ನು

'ಕೆಮ್ಮಿದರೆ
ಫ್ರಿಜ್ಜಿನ ತಂಪು ದ್ರಾಕ್ಷಿಯ ಬಯಕೆ,
ಬಾಯಾರಿದರೆ
ಉಪ್ಪು ನೆಕ್ಕು ಆಸೆ'[9] (ಕವಿತೆ 3)

ಎಂದು ವಿವರಿಸುತ್ತಾರೆ. ಈ ಸಂದರ್ಭದಲ್ಲಿ ಎಚ್.ಎಸ್.ಆರ್.ರವರು ಹೇಳುವ 'ಕೊನೆಗೂ ಈ ಕವಿಗೆ ಕವಿತೆಯೇ ಖಾಯಿಲೆ, ಕವಿತೆಯೇ ಔಷಧ,'[10] ಎಂಬುದು ಸರಿಯಾಗಿದೆಯೆನಿಸುತ್ತದೆ.

ಕವಿಗಳು ತಮ್ಮ ಹಿಂಜರಿಕೆ ಹಾಗೂ ತಮಗೆ ತಾವೇ ಹಾಕಿಕೊಂಡಿರುವ ಕೆಲವು ನಿರ್ಬಂಧಗಳನ್ನು ಮುರಿದಾಗ ಮಾತ್ರ ತನ್ನ ಅಸ್ತಿತ್ವವನ್ನು ಹೆಣ್ಣು ಗಂಡುಗಳ ದೇಹ ವಿವರಗಳನ್ನು ಕೊಡುವಾಗ ಮುಚ್ಚುಮರೆ ಮಾಡುವುದಿಲ್ಲ. ಈ ರೀತಿಯ ಅಭಿವ್ಯಕ್ತಿಯನ್ನು ಆಕ್ಷೇಪಿಸುವ ವಿಮರ್ಶಕರೊಬ್ಬರು 'ಪುರುಷ ಅಪೇಕ್ಷಿಸಿದ ಸ್ತ್ರೀ ಕಾವ್ಯದ ರೊಮ್ಯಾಂಟಿಕ್ ಮಗ್ಗುಲನ್ನು ಕಿತ್ತು ಹಾಕಿದ್ದು ಪ್ರತಿಭಾ ಅವರ ದೊಡ್ಡ ಸಾಧನೆ ಎಂದು ಹೇಳಬಹುದು. ಆದರೆ ಅದಕ್ಕೆ ಅವರು ತಂದಿಟ್ಟಿರುವ ಪರ್ಯಾಯಗಳ ಜಗತ್ತು ಕೂಡ ಪುರುಷ ಜಗತ್ತನ್ನು ತಣಿಸುವಂತೆ ಇದೆ ಎನ್ನುವುದೇ ನನ್ನ ವಿಷಾದ'[11] ಎಂದಿದ್ದಾರೆ. ಇಲ್ಲಿ ಕವಿ ಬಳಸಿದ ಪದಗಳು ಹಾಗೂ ಚಿತ್ರಗಳು ಅವರು ಹೇಳಬಯಸುವ ಮಾತುಗಳಿಗಾಗಿ ಬಂದಿವೆಯೇ ಹೊರತು ಪುರುಷ ಜಗತ್ತನ್ನು ತಣಿಸುವ ಉದ್ದೇಶ ಅವುಗಳಿಗೆ ಇದ್ದಂತಿಲ್ಲ. ಅಲ್ಲದೆ ನವ್ಯ ಚಳುವಳಿಯ ಸಂದರ್ಭದಲ್ಲಿ ಅನೇಕ ಪುರುಷರು ಬರೆದ ಕವಿತೆಗಳಿಗೆ ಇಲ್ಲದ ಮಡಿವಂತಿಕೆಯನ್ನು ಈ ಕವಿಯಲ್ಲಿ ಇರಬೇಕೆಂದು ಬಯಸುವುದು ಸರಿಯೇ ಎಂದು ಕೇಳಬಹುದಾಗಿದೆ.

ಪ್ರತಿಭಾ ಅವರು ತಮ್ಮ ಕವಿತೆಗಳಲ್ಲಿ ಬಳಸುವ ಸ್ವಚ್ಛಂದವಾದ ಪದಗಳ ಬಗೆಗೆ, 'ಒಂದು ಸಲ ನನ್ನ ಕವಿ ಮಿತ್ರನೊಬ್ಬ, ನಾನು ಪದಗಳ 'ಸಂವೇದನಾ ಶಕ್ತಿ' (Sensous awe) ಯನ್ನು ತೆಗೆದು ಹಾಕಿ ತುಂಬಾ ಕ್ಲಿನಿಕಲ್ ಆಗಿ ಬರೆಯುತ್ತೀನಿ ಅಂತ ದೂರಿದ. ಹೆಂಗಸರು ಮೊಲೆ, ಸಂಭೋಗ ಇಂತಹ ಪದಗಳನ್ನು 'ಲೀಲಾಜಾಲವಾಗಿ' ಬಳಸಬಾರದಂತೆ. ಇದರಿಂದ ಆ ಪದಗಳ ರೋಚಕತೆ ಕಳೆದುಹೋಗುವುದಂತೆ. 'ನನ್ನ ಉದ್ದೇಶ ಅದೇ' ಅಂದೆ, ಅಂದರೆ ಹಳೆಯ, ಪುರಾತನ ರೋಲ್ ಮಾಡೆಲ್ ನಿಂದ ಹೊರಬಂದು ಅಭಿವ್ಯಕ್ತಿಗೆ ಹೊಸ ಆಯಾಮ ನೀಡುವುದು'[12] ಎಂದು ಒಂದು ಘಟನೆಯನ್ನು ಕವಿತೆಗೆ ಕಾರಣ (ಆಹಾ, ಪುರುಷಾಕಾರಂ!)ದಲ್ಲಿ ಹೇಳಿದ್ದಾರೆ.

ಪುರುಷ ಪ್ರಧಾನ ಸಾಹಿತ್ಯಧಾರೆಯು ತನ್ನ ಅಭಿವ್ಯಕ್ತಿಯಲ್ಲಿ ಮೊಲೆ ಸಂಭೋಗ ಮುಂತಾದ ಪದಗಳನ್ನು ಲೀಲಾಜಾಲವಾಗಿ ಬಳಸುವುದರಿಂದ ಕೃತಿಯ ರೋಚಕತೆ ಹೆಚ್ಚಾಗುತ್ತದೆಂದು ತಿಳಿದಿರುವ ಇವರು ಮಹಿಳೆಯರು ಇದನ್ನು ಮಾಡಿದಾಗ ಆ ರೋಚಕತೆ ಇಲ್ಲವಾಗುತ್ತದೆ ಎಂದು ಹೇಳುತ್ತಾರೆ. ಆದರೆ ಮತ್ತೊಂದು ಬಗೆಯ ವಿಮರ್ಶಕರು ಹೆಣ್ಣಿನ ಅಸಮ ಲೈಂಗಿಕತೆಯ ಚಿತ್ರಣ ನೀಡಿದಾಗ ಅದು ಪುರುಷ ಜಗತ್ತನ್ನು ತಣಿಸುವಂತೆ ಇದೆ ಎಂದೂ ಆಕ್ಷೇಪಿಸುತ್ತಾರೆ. ಈ ಎರಡೂ ಬಗೆಯ ಆಕ್ಷೇಪಣೆಗಳೂ ಹೆಂಗಸರು ಈ ರೀತಿಯ ಅಭಿವ್ಯಕ್ತಿಯಲ್ಲಿ ತೊಡಗಿಸಿಕೊಂಡಾಗ ಪುರುಷ ಸಾಹಿತಿಗಳ ಸ್ಥಾನದಲ್ಲಿ ವ್ಯತ್ಯಾಸವಾಗಬಹುದೆಂಬ ದಿಗಿಲು ಅಥವಾ ಹೆಂಗಸರು ಈ ರೀತಿಯ ಅಭಿವ್ಯಕ್ತಿಗೆ ಮುಂದಾಗಿರುವುದನ್ನು ಒಪ್ಪಿಕೊಳ್ಳಲಾಗದ ಮನಸ್ಥಿತಿಯನ್ನು ಸೂಚಿಸುತ್ತಿರಬಹುದು.

'ಅವಳು ತನ್ನವಳಾದಷ್ಟು ತಾನು ಅವಳವನಲ್ಲ
ತನ್ನ ವೀರ್ಯದ ಆತ್ಮಕ್ಕೆ ಸಾಟಿಯೆ ಅವಳ ಬಸಿರ ಕಾಯ
ಬೆದೆಗೆ ಬಂದವಳನ್ನು ಬಲೆಗೆ ಸಿಕ್ಕಿಸಿ ಉಜ್ಜಿ ಸಿಪ್ಪೆ ಸಿಗಿದು
ಕತ್ತರಿಸಿ ಬಾಂಡಲೆಯಲ್ಲಿ ಮಸಾಲೆ ಸಹಿತ ಹುರಿದು
ಕರುಳ ಕುದಿತಕ್ಕೆ ಬಲಿಕೊಟ್ಟು ಬಾಯೊಡ್ಡಿ ಚಪ್ಪರಿಸಿ ತೇಗಿ ಆಹಾ
ಜೋತ ಮೊಲೆ ಸೋತ ತುಟಿಯ ಪುಳಕವೇನು ಮಹಾ
ಎಂದು ಹಂಗಿಸಿ ನಿಗುರಿದ ಶಿಶ್ನದಿಂದ ತಿವಿದು ಮೂತಿ
ಎದೆಯ ಫಲದ ಬೆಳೆ ಕಿತ್ತು ಕೊಟ್ಟವಳು
ಉಪ್ಪರಿಗೆಯವಳಿಗಿಂತ ಮಿಗಿಲಲ್ಲ

ಕಾದವಳ ಕಾಯದ ಕಿಮ್ಮತ್ತು ಭಾರಿಯಲ್ಲ
ಬರಿ ತೊಗಟೆ ಇವಳು ಅವಳು ಮುಖವಲ್ಲು
...........................................................
...........................................................
ಬಸಿರ ಕಥಾನಕದಲ್ಲಿ
ಏನೀಗ ಎದ್ದು ಹೋದರೆ
ಯೋನಿಗೆ ಅಪಚಾರವಾದರೆ
ಉನ್ಮತ್ತ ಮೊಲೆ ತೊಟ್ಟು ಬಿಟ್ಟು ನಡೆದರೆ'.

ಈ ಕವಿತೆಯ ವಸ್ತು, ಉದ್ದೇಶ ಎರಡೂ ಚೆನ್ನಾಗಿದ್ದರೂ ಈ ವಿವರಗಳು ಉದ್ದೇಶವನ್ನು ಹದಗೆಡಿಸಿವೆ. ಈ ವಿವರಗಳಿಂದ ಹೊಸ ಆಯಾಮ ಬರುವುದಕ್ಕಿಂತ ಋಣಾತ್ಮಕ ವಾಚ್ಯತೆ ಬಂದು ಬಿಟ್ಟಿದೆ. ಕ್ಯಾಬರೆ ನೋಡಿ ಆನಂದಿಸುತ್ತಾ ಅವಳ ಬದುಕಿನ ದುರಂತಕ್ಕೆ ಮರುಗುತ್ತಿದ್ದೇವೆ ಎಂದು ಹೇಳಿದರೆ ನಂಬಬಹುದೇ? ಅದೇ ರೀತಿ ಈ ವಿವರಗಳ ಮಾರ್ಗ ಪ್ರತಿಭಾ ಕಾವ್ಯಕ್ಕೆ ಸಿಗಬಹುದಾಗಿದ್ದ ಓದನ್ನು ಕಳೆದುಕೊಳ್ಳುವಂತೆ ಮಾಡಿದೆ'.[13] ಈ ಹೇಳಿಕೆಯನ್ನು ಸಮರ್ಥಿಸಲು ಸಾಧ್ಯವಿಲ್ಲವೆನಿಸುತ್ತದೆ. ಬಲಿ, ಮಾಂಸದ ಅಡುಗೆಯ ಸಂಕೇತಗಳು ಬಂದಾಗಲೇ ಅಲ್ಲಿ ಹಿಂಸೆಯ ಚಿತ್ರ ಸ್ಪಷ್ಟವಾಗಿ ಕಾಣುತ್ತದೆ. ಮುಂದುವರಿದ ಭಾಗದಲ್ಲಿ ಹೆಣ್ಣನ್ನು ಹೀನವಾಗಿ ಕಾಣುವ ಪುರುಷ ತನ್ನ ಬಯಕೆ ತೀರಿದ ಮೇಲೆ ಹಂಗಿಸುವ ರೀತಿ ಹಾಗೂ ಆ ಹೆಣ್ಣಿನ ಸ್ಥಿತಿಯನ್ನು ಕುರಿತು ಕಿಂಚಿತ್ತೂ ಅಪರಾಧೀ ಭಾವವನ್ನು ಹೊಂದದಿರುವುದರ ಚಿತ್ರಣವಿದೆ. ಇಲ್ಲಿ ಹೆಣ್ಣನ್ನು ತನಗೆ ಸಮಾನವಾಗಿ ಕಾಣಬಲ್ಲ ಯಾರಿಗೂ ಅದು ಕ್ಯಾಬರೆ ನೋಡುತ್ತಾ ಆನಂದಿಸುವಂತಹ ಮನರಂಜನೆಯನ್ನು ನೀಡುತ್ತದೆ ಎನ್ನಿಸುವುದಿಲ್ಲ.

'ಪ್ರತಿಭಾ ಕಾವ್ಯದ ಘಾರಂನ ಬಗ್ಗೆ ಅತಿಯಾಗಿ ತಲೆಕೆಡಿಸಿಕೊಂಡವರಲ್ಲ. ಭಾಷೆಯು ಕಾವ್ಯವಾಗುವ ಪವಾಡವನ್ನು ನಿಶ್ಚಿಂತೆಯಿಂದ ನಂಬಿರುವವರ ನಿರಾಳತೆಯಲ್ಲಿ ಪ್ರತಿಭಾ ಬರೆಯುತ್ತಾರೆ. ನವ್ಯದ ಭಾಷಾಶಿಲ್ಪದ ಮೋಹದಿಂದ ಹೊರಬಂದವರ ನಿರುಮ್ಮಳತೆಯಲ್ಲಿ ಬರೆಯುವ ಪ್ರತಿಭಾಗೆ ಹೀಗೆಂದ ಮಾತ್ರಕ್ಕೆ ಕಾವ್ಯ ಶಿಲ್ಪದ ಕಸುಬುದಾರಿಕೆಯ ಬಗ್ಗೆ ಅಥವಾ ಭಾಷಾ ಸೌಂದರ್ಯದ ಬಗ್ಗೆ ಅಸಡ್ಡೆಯಿದೆ ಎಂದಲ್ಲ. ಭಾಷೆಯ ದೃಷ್ಟಿಯಿಂದ ಪ್ರವರ್ತಕರಲ್ಲದಿದ್ದರೂ ತಮ್ಮದೇ ಆದ ದಾರಿಯನ್ನು ಹಿಡಿದು ನಡೆದವರು ಇವರು. ಯಾವುದನ್ನೂ ಪ್ರಶ್ನಿಸುವ ಎದೆಗಾರಿಕೆ, ಯಾವ

ಹೊತ್ತಿಗೂ ಕಳೆದುಕೊಳ್ಳದ ಮಾರ್ದವ, ಎಲ್ಲ ಹೊತ್ತಿಗೂ ಉಳಿಸಿಕೊಳ್ಳಲು ಬಯಸುವ ಸೂಕ್ಷ್ಮತೆಯೇ ಇವರ ಕಾವ್ಯಕ್ಕೆ ಜೀವಂತಿಕೆಯನ್ನು, ವೈವಿಧ್ಯತೆಯ ಲಯವನ್ನು ಪ್ರಸ್ತುತತೆಯನ್ನು ತಂದುಕೊಟ್ಟಿದೆ'.[14] ಹೀಗೆ ತಮ್ಮದೇ ಒಂದು ಶೈಲಿಯನ್ನು ರೂಢಿಸಿಕೊಂಡಿರುವ ಇವರು ಭಾಷೆಯನ್ನು ಬಳಸುವಾಗ ಸಹ, ಅನುಭವಗಳ ನಿರೂಪಣೆಗೆ ಅಡ್ಡಿಯಾಗದಂತೆ ಸ್ವಚ್ಛಂದವಾದ ಮಾರ್ಗವನ್ನು ಅನುಸರಿಸಿದ್ದಾರೆ ಎನ್ನಬಹುದು.

ಈ ದೃಷ್ಟಿಯಿಂದ 'ಚಾರಿತ್ರಿಕ ಮಹತ್ವದ ಸನ್ನಿವೇಶದಲ್ಲಿ ಕವಿಯ ಬಿಡಿ ಕವನಗಳ ಸೋಲು-ಗೆಲುವುಗಳ ಚರ್ಚೆಗಿಂತ ಬರವಣಿಗೆಯ ಪ್ರಬಂಧ ಧ್ವನಿ ನಿರ್ಣಾಯಕ'.[15] ಹೀಗೆ ಹೆಣ್ಣಿನ ವೈಯಕ್ತಿಕ ನೆಲೆಯಲ್ಲಿಯೇ ಅವಳ ಎಲ್ಲ ಆಯಾಮಗಳ ತಿಳುವಳಿಕೆಯನ್ನು ಪ್ರತಿಭಾ ಅವರ ಕಾವ್ಯ ಮೂಡಿಸುತ್ತದೆ ಎನ್ನಬಹುದು.

**ಅಡಿಟಿಪ್ಪಣಿ:**

1. ಡಾ. ಎಚ್.ಎಸ್. ರಾಘವೇಂದ್ರರಾವ್, 'ಮುನ್ನುಡಿ ಬೆನ್ನುಡಿಗಳ ನಡುವೆ' (ಮುನ್ನುಡಿ), ಮಹಿಳಾ ಸಾಹಿತ್ಯಿಕ ಪ್ರಕಾಶನ, ನವನಗರ, ಹುಬ್ಬಳ್ಳಿ, 2006 ಪುಟ 17.
2. ಅದೇ. ಪುಟ 11
3. ಅದೇ. ಪುಟ 25
4. ಪ್ರತಿಭಾ ನಂದಕುಮಾರ್, 'ಮುನ್ನುಡಿ ಬೆನ್ನುಡಿಗಳ ನಡುವೆ', ಮಹಿಳಾ ಸಾಹಿತ್ಯಿಕ ಪ್ರಕಾಶನ, ನವನಗರ, ಹುಬ್ಬಳ್ಳಿ, 2006, ಪುಟ 389.
5. ಅದೇ.
6. ಅದೇ. ಪುಟ 307
7. ಅದೇ. ಪುಟ 388
8. ಅದೇ. ಪುಟ 255
9. ಅದೇ. ಪುಟ 218
10. ಎಚ್.ಎಸ್. ರಾಘವೇಂದ್ರರಾವ್, ಪೂರ್ವೋಕ್ತ, ಪುಟ 11
11. ಎನ್.ಎಸ್. ಶ್ರೀಧರಮೂರ್ತಿ, 'ಪ್ರತಿಭಾ ನಂದಕುಮಾರ್: ಕಾವ್ಯದ ಓದಿನ ಜೊತೆಗೆ ಒಂದಿಷ್ಟು ಪ್ರಶ್ನೆಗಳು', ಸಂಚಯ ತ್ರೈಮಾಸಿಕ ಪತ್ರಿಕೆ, ಸಂಪುಟ 15, ಸಂಚಿಕೆ 3(72), ನವೆಂಬರ್ 2006, ಪುಟ 62.
12. ಪ್ರತಿಭಾ ನಂದಕುಮಾರ್, 'ಆಹಾ, ಪುರುಷಾಕಾರಂ!' (ಕವಿತೆಗೆ ಕಾರಣ) ನೆಲಮನೆ ಪ್ರಕಾಶನ, ಶ್ರೀರಂಗಪಟ್ಟಣ, 2000, ಪುಟ 6.
13. ಎನ್.ಎಸ್. ಶ್ರೀಧರಮೂರ್ತಿ, ಪೂರ್ವೋಕ್ತ, ಪುಟ 63.
14. ಎಂ.ಎಸ್. ಆಶಾದೇವಿ, ಸಂಚಯ ತ್ರೈಮಾಸಿಕ ಪತ್ರಿಕೆ, ಪೂರ್ವೋಕ್ತ, ಪುಟ 48.
15. ಅದೇ. ಪುಟ 48

### ಅಧ್ಯಾಯ-6

# ಸಮಕಾಲೀನ ಮಹಿಳಾ ಕಾವ್ಯದೊಂದಿಗೆ ಪ್ರತಿಭಾ ಕಾವ್ಯದ ತೌಲನಿಕ ನೋಟ

ಕನ್ನಡ ಮಹಿಳಾ ಕಾವ್ಯವು ಎಂಭತ್ತರ ದಶಕದಲ್ಲಿ ಒಂದು ಪಲ್ಲಟವನ್ನು ಕಂಡಿತೆನ್ನಬಹುದು. ಇಲ್ಲಿಂದ ಹಲವಾರು ಮಹಿಳೆಯರು ಕವಿತೆಗಳನ್ನು ಬರೆಯಲು ತೊಡಗಿದರು. ಮೊಟ್ಟ ಮೊದಲು ಕವಿತೆಗಳನ್ನು ಬರೆದ ಕವಿಗಳಲ್ಲಿ ಚ.ಸರ್ವಮಂಗಳ, ಸ. ಉಷಾ, ಶಶಿಕಲಾ ವೀರಯ್ಯ ಸ್ವಾಮಿ, ಎನ್.ವಿ.ಭಾಗ್ಯಲಕ್ಷ್ಮಿ, ಶೈಲಜಾ ಉಡಚಣ, ಪ್ರತಿಭಾ ನಂದಕುಮಾರ್ ಮುಂತಾದವರು ಇದ್ದಾರೆ. ಸಮಕಾಲೀನ ಮಹಿಳಾ ಕವಿಗಳೆಂದಾಗ ಈ ಕವಿಗಳಲ್ಲದೆ ನಂತರದ ದಶಕಗಳಲ್ಲಿ ಬರೆಯಲಾರಂಭಿಸಿದ ಕವಿಗಳನ್ನು ಸಹ ಪರಿಗಣಿಸಬಹುದಾಗಿದೆ. ಇಲ್ಲಿ ನನ್ನ ಗಮನಕ್ಕೆ ಬಂದ ಕೆಲವು ಕವಿಗಳ ಕವನ ಸಂಕಲನಗಳ ಕವಿತೆಗಳಲ್ಲಿ ಪ್ರತಿಭಾ ಅವರ ಕಾವ್ಯವನ್ನು ಹೋಲುವ ಹಾಗೂ ಅವುಗಳಲ್ಲಿ ಪ್ರತಿಭಾ ಅವರ ಕಾವ್ಯಕ್ಕಿಂತ ಭಿನ್ನವಾದ ಅಂಶಗಳನ್ನು ಗುರುತಿಸಲು ಯತ್ನಿಸಲಾಗಿದೆ.

ಮುಕ್ತಾಯಕ್ಕ, ಹೇಮಾ ಪಟ್ಟಣಶೆಟ್ಟಿ, ಶೈಲಜಾ ಉಡಚಣ, ಕೆ. ಷರೀಫಾ, ಎಚ್.ಎಲ್. ಪುಷ್ಪ, ಸ. ಉಷಾ, ವೈದೇಹಿಯವರ ಕವನಸಂಕಲನಗಳಲ್ಲಿ ಕೆಲವನ್ನು ಆದರಿಸಿದ ಒಂದು ತೌಲನಿಕ ನೋಟ ಇದಾಗಿದೆಯೆನ್ನಬಹುದು. ಈ ಕವಿಗಳಲ್ಲಿ ಕೆಲವರು ಹೆಣ್ಣನ್ನೇ ತಮ್ಮ ಕಾವ್ಯದ ಕೇಂದ್ರವಾಗಿಟ್ಟುಕೊಂಡಿರುವುದನ್ನು ಹಾಗೂ ಇತರ ಸಾರ್ವತ್ರಿಕ ಅಥವಾ ಸಾರ್ವಜನಿಕ ಎನ್ನಬಹುದಾದಂತಹ ವಸ್ತುಗಳನ್ನು ಅಪರೂಪವಾಗಿ ತಮ್ಮ ಕಾವ್ಯಕ್ಕೆ ಆಯ್ಕೆ ಮಾಡಿಕೊಂಡಿರುವುದನ್ನು ಕಾಣಬಹುದು. ಮತ್ತೆ ಕೆಲವು ಕವಿಗಳು ಹೆಣ್ಣಿನ ಬದುಕು ಹಾಗೂ ಸಮಾಜದ ಇತರ ತಾರತಮ್ಯಗಳು ಹಾಗೂ ವಿದ್ಯಮಾನಗಳಿಗೂ ಸಮಾನವಾಗಿ ಸ್ಪಂದಿಸಿರುವುದನ್ನು ಕಾಣಬಹುದು. ಪ್ರತಿಭಾ ಅವರು ಇವರುಗಳಲ್ಲಿ ಮೊದಲನೆಯ ವರ್ಗಕ್ಕೆ ಸೇರುವರೆಂದು ತಿಳಿಯಬಹುದು.

ಮುಕ್ತಾಯಕ್ಕ, ಅವರ ಕಾವ್ಯ, ತನ್ನ ವಸ್ತು ಹಾಗೂ ಅಭಿವ್ಯಕ್ತಿಸುವ ಸಾಹಿತ್ಯ ಪ್ರಕಾರದಿಂದ ವೈಶಿಷ್ಟ್ಯಪೂರ್ಣವಾಗಿದೆ. ಮುಕ್ತಾಯಕ್ಕ ಅವರು ಗಝಲ್‌ಗಳಲ್ಲಿ ಅಭಿವ್ಯಕ್ತಿಸುವ ರೀತಿ ಪ್ರಯೋಗದ ದೃಷ್ಟಿಯಿಂದ ಹೊಸದೆನ್ನಿಸುತ್ತದೆ. ಇವರ 'ನೀವು ಕಾಣಿರೆ, ನೀವು ಕಾಣಿರೆ' ಎಂಬ ಕವನಸಂಕಲನವನ್ನು ಹೊರತುಪಡಿಸಿದರೆ ಉಳಿದ ಎರಡು ಕೃತಿಗಳು ಗಜಲ್‌ಗಳ ರೂಪದಲ್ಲಿವೆ. ಹೆಣ್ಣನ್ನೇ ಪ್ರಧಾನ ವಸ್ತುವಾಗಿ ಇವರು ಕಾವ್ಯದಲ್ಲಿ

ತೆಗೆದುಕೊಂಡಿದ್ದಾರೆನ್ನಬಹುದು. ಅವರ 'ಒಂದು ಪರಿಚಯ' ಕವಿತೆ ಹೆಣ್ಣಿನ ಅಸ್ತಿತ್ವ ಯಾವ ಬಗೆಯಲ್ಲಿ ಸಮಾಜದಲ್ಲಿ ಗುರುತಿಸಲ್ಪಡುತ್ತದೆ ಎಂಬುದನ್ನು ವಿವರಿಸುತ್ತಾ

'ಗೆಳೆಯ, ಈ ವ್ಯವಸ್ಥೆಗೆ ಸಿಕ್ಕು ತಾಯಿ, ತಂಗಿ,
ಸೂಳೆ ಇನ್ನೂ ಏನೇನೋ ಆಗಿ ದಡವಿಲ್ಲದ
ಸಮುದ್ರದ ಗುಂಟ ದಡ ಹುಡುಕಿ ಹೊರಟವರು
ನೋವು ನರಳಿಕೆಯ ಅಮರತ್ವದ ಪಟ್ಟ
ವೆಂಬ ನೊಗ ಹೊತ್ತವರು; ನಾವು ಮುಖ
ವಿಲ್ಲದವರು; ಇರಲಿ ಗೆಳೆಯ ನೀನು ಹೇಳ
ಲೇಬೇಕೆಂದರೆ ಹೇಳುವೆ ಕೇಳು:
ನನಗಿಷ್ಟೇ ಗೊತ್ತು; "ನಾನೊಂದು ಹೆಣ್ಣು"
ಇದೇ ಇಲ್ಲಿಯ ನಮ್ಮ ಗುರುತು ಪರಿಚಯ.
ಹೌದು ನಾನು ಕೇವಲ ಒಂದು ಹೆಣ್ಣು
ಕೇವಲ, ಕೇವಲ ಮಾತ್ರ'[1]

ಎಂದು ಹೆಣ್ಣಿಗೆ ತನ್ನದೇ ಆದ ಸ್ವತಂತ್ರ ಅಸ್ತಿತ್ವನ್ನು ಹೊಂದಲು ಈ ವ್ಯವಸ್ಥೆ ಬಿಡದಿರುವ ಬಗ್ಗೆ ವಿಷಾದ ವ್ಯಕ್ತಪಡಿಸುವ ರೀತಿ ತನ್ನನ್ನು 'ನಾನು ಕೇವಲ ಒಂದು ಹೆಣ್ಣು/ಕೇವಲ, ಕೇವಲ ಮಾತ್ರ' ಎಂದು ಹೇಳಿಕೊಳ್ಳುತ್ತಾರೆ. ಹೀಗೆ ಕವಿತೆಯ ರೂಪದಲ್ಲಿ ಬರೆಯಬಲ್ಲ ಕವಿ ಗಜ಼ಲ್‌ಗಳನ್ನು ಹೆಚ್ಚು ಮೆಚ್ಚುತ್ತಾರೆಂದು ಕಾಣುತ್ತದೆ. ಆದ್ದರಿಂದಲೇ ಅವರು ಗಜ಼ಲ್‌ಗಳ ಸಂಕಲನಗಳನ್ನು ಹೊರತಂದಿದ್ದಾರೆ. ಮೂವತ್ತೈದು ಗಜ಼ಲುಗಳು ಹಾಗೂ ನಲವತ್ತು ಗಜ಼ಲುಗಳು ಎಂಬ ಕೃತಿಗಳು ಅವುಗಳಲ್ಲಿ ಸೇರಿವೆ. ಗಜ಼ಲುಗಳನ್ನು ಕನ್ನಡದ ಜಾಯಮಾನಕ್ಕೆ ಒಗ್ಗಿಸುವ ಪ್ರಯತ್ನ ಮಾಡಿರುವ ಕವಿ, ಪ್ರೇಮ, ಮೋಹ, ಒಂಟಿತನಗಳನ್ನು ವ್ಯಕ್ತಪಡಿಸಲು ಇದನ್ನು ಮಾಧ್ಯಮವಾಗಿ ಬಳಸಿಕೊಂಡಿದ್ದಾರೆನ್ನಬಹುದು.

ಮಧುಶಾಲೆ, ಸಾಕಿ, ಮದ್ಯ, ಮತ್ತತೆ ಮುಂತಾದ ಪದಗಳನ್ನು ಬಳಸಿ ಒಂದು ಬಗೆಯ ಪರವಶತೆ, ಪ್ರೇಮೋನ್ಮಾದಗಳನ್ನು ವ್ಯಕ್ತಪಡಿಸುವುದನ್ನು ಇವರ ಗಜ಼ಲ್‌ಗಳಲ್ಲಿ ಕಾಣಬಹುದು. ಗಂಡು ಹೆಣ್ಣಿನ ಸಂಬಂಧದ ಕ್ಷಣಿಕತೆಯನ್ನು ಹೇಳುತ್ತಾ,

'ಹೋಗುವಾಗ ಕಂಬನಿಗಳ ತುಳುಕಿಸದಿರು ಎನ್ನುವವನು
ಕಳೆದ ಕ್ಷಣಗಳ ಸವಿಯ ಬಾಡಿಸದಿರು ಎನ್ನುವವನು
ಎಂದಿದ್ದರೂ ಮಳೆ ಬೆಟ್ಟಗಳ ಸಂಬಂಧ ನಮ್ಮದು
ಇನಿತಾದರೂ ದೊರೆತದ್ದು ಮರೆಯದಿರು ಎನ್ನುವವನು'[2] (ಗಜ಼ಲ್ - 10)

ಎಂದು ಅಗಲುವಿಕೆಯ ನೋವನ್ನು ವಿವರಿಸುತ್ತಾರೆ. ಇಲ್ಲಿ ಹೆಣ್ಣು ಬಯಸುವ ಸಖ್ಯ ಅವಳಿಗೆ ಬೇಕೆಂದಾಗ ದೊರೆಯದಿರುವುದರ ದುಃಖದ ಚಿತ್ರಣವಿದೆ. ಈ ದುಃಖಕ್ಕೆ ಸಮಾಧಾನದ ಮಾತುಗಳನ್ನು ಅವಳ ಪ್ರಿಯಕರನು ಆಡಿದರೂ ಅವಳಿಗೆ ಸಮಾಧಾನವಾಗದು.

ಮತ್ತೊಂದು ಗಝಲಿನಲ್ಲಿ ಜಗತ್ತು ತನ್ನನ್ನು ಯಾವ ರೀತಿಯಲ್ಲಿಯೂ ಮೆಚ್ಚುವುದಿಲ್ಲವೆಂಬ ಸತ್ಯವನ್ನು ಅರಿತಾಗ,

'ಹೇಗಿದ್ದರೂ ಏನು ಮಾಡಿದರೂ ಸರಿ ಈ ಜಗವು ಮೆಚ್ಚುವುದಿಲ್ಲ
ನಶ್ವರ ಆದರೆ ಸುಂದರ ಬದುಕ ಪ್ರೀತಿಸುವುದ ಮನಗಂಡಿದ್ದೇನೆ
ಕಾಡುಹಕ್ಕಿ ಚುಕ್ಕಿ ನೆಲ ಎಲ್ಲವನ್ನು ಎದೆ ತುಂಬಿ ನೋಡುತ್ತೇನೆ
ಬದುಕುವುದೇ ನಿಜವೆಂದಾಗ ಚೆಂದವಾಗಿರಲು ಕಲಿತಿದ್ದೇನೆ'[3] (ಗಝಲ್ 37)

ಎಂದು ಧೈರ್ಯ ತಂದುಕೊಳ್ಳುವ ನಾಯಕಿ ತನ್ನ ಮನಸ್ಸು ಇಚ್ಛೆಪಡುವುದನ್ನು ಮಾಡಲು ನಿರ್ಧರಿಸುತ್ತಾಳೆ.

ಮುಕ್ತಾಯಕ್ಕ ಅವರ ಕವಿತೆಗಳ ರೊಮ್ಯಾಂಟಿಕ್ ಮನೋಭಾವವನ್ನು ಗುರುತಿಸುವ ಬಿ.ಸಿ.ರಾಮಚಂದ್ರಶರ್ಮರು 'ಮುಕ್ತಾಯಕ್ಕ ಅವರ ರೊಮ್ಯಾಂಟಿಕ್ ಮನೋಭಾವವನ್ನು ಅವರ ಕಾವ್ಯದ ವಸ್ತುವಿನಲ್ಲಿ ಕಾಣುವ ಹಾಗೇ ಅವರು ಅದನ್ನು ಅಭಿವ್ಯಕ್ತಿಸುವುದಕ್ಕಾಗಿ ಬಳಸುವ ಮಾತು ಹಾಗೂ ಪ್ರತಿಮೆಗಳಲ್ಲಿ ಕಾಣಬಹುದು. ಉದಾಹರಣೆಗೆ, ಗುಲಾಬಿ, ಅದರ ಮುಳ್ಳು, ನಕ್ಷತ್ರ, ಕಣ್ಣುಗಳಿಂದ ಗಲ್ಲದಗುಂಟ ಜಾರುವ ಮುತ್ತು, ಮಧುಬಟ್ಟಲು ಹಾಗೂ ದ್ರಾಕ್ಷಾರಸ ಸಿಹಿಯಾಗಿದ್ದದ್ದು ಹುಳಿಯಾಗುವುದು, ನಶೆ ಇತ್ಯಾದಿ ಇತ್ಯಾದಿ ಸಾಂಪ್ರದಾಯಿಕ ಪ್ರತಿಮೆಗಳಲ್ಲೇ ಕಾವ್ಯನಾಯಕಿ ಹಾಗೂ ಅವನ ಪ್ರೇಮದ ವ್ಯಾಖ್ಯಾನ ನಡೆಯುವುದನ್ನು ಕಾಣಬಹುದು'[4] ಎಂದಿದ್ದಾರೆ.

ಪ್ರತಿಭಾ ಅವರ ಕಾವ್ಯದ ಲೋಕವು ಖಾಸಗಿ ಪ್ರಪಂಚದ್ದೇ ಆದರೂ ರೊಮ್ಯಾಂಟಿಕ್ ಅನುಭವಗಳನ್ನು ಕೆಲವೊಮ್ಮೆ ದಾಖಲಿಸುವುದನ್ನು ಕಾಣುತ್ತೇವೆ. ರೊಮ್ಯಾಂಟಿಕ್ ಮನೋಭಾವಕ್ಕೆ ತದ್ವಿರುದ್ಧವಾದ ಅಸ್ತಿತ್ವದ ನೆಲೆಯಲ್ಲಿ ಅತ್ಯಂತ ನಿಷ್ಠುರವಾಗಿ ಅನುಭವಗಳನ್ನು ದಾಖಲಿಸುವ ಮಾದರಿ ಇದಾಗಿದೆ. ರೊಮ್ಯಾಂಟಿಕ್ ಎನ್ನಿಸಬಹುದಾದ ಕವನಗಳು ಈ ಕವಿಯಲ್ಲಿ ಕಂಡುಬಂದರೂ ಯಾವುದಾದರೂ

ರೊಮ್ಯಾಂಟಿಕ್ ಭಾವದ ಹಿಂದಿರುವ ಒಳಪದರವನ್ನು ಹೊರಕ್ಕೆಳೆದು ತೋರುವ ವಾಸ್ತವಿಕತೆಯಿಂದ ಎಚ್ಚರಿಸುವಂತಹವಾಗಿವೆ. 'ನಾನು, ಹುಡುಗ ಮತ್ತು ಕಾಲ' ಕವಿತೆಯಲ್ಲಿ ಹುಡುಗನೊಬ್ಬ ಕವಿಗೆ ಹದಿನಾರರ ಹರೆಯ ತನಗೆ ಬಂದಾಗ ಕನಸಿನ ರಾಜಕುಮಾರನಂತೆ ಕಾಣುತ್ತಾನೆ. ಅಪರಂಜಿ ಗುಣದ ಮೀರಿದ ಬುದ್ಧಿವಂತ ಆತ, ಹದಿನೆಂಟರ ಹರೆಯದಲ್ಲಿ ಇನ್ನೂ ಸ್ವಲ್ಪ ಎತ್ತರವಿರಬೇಕಿತ್ತು ಎಂಬ ಕೊರತೆ ಕಾಣುತ್ತದೆ. ಒಂದೆರಡು ವೋಸ ಸುಳ್ಳು ಅಸಹನೆಯನ್ನು ನಾಯಕಿ ಗಂಭೀರವಾಗಿ ತೆಗೆದುಕೊಳ್ಳುವುದಿಲ್ಲ. ಆದರೆ ಇಪ್ಪತ್ತು ತುಂಬಿದ ನಾಯಕಿಗೆ ಅದೇ ಹುಡುಗ ಪೆದ್ದುಪೆದ್ದಾಗಿ ಕಾಣುತ್ತಾನೆ. ಹೀಗೆ ತನ್ನ ಬುದ್ಧಿಯ ಬೆಳವಣಿಗೆಗನುಗುಣವಾಗಿ ಹುಡುಗನನ್ನು ನೋಡುವ ರೀತಿ ಬೇರೆಯಾಗುತ್ತದೆ. ಮುಕ್ತಾಯಕ್ಕ ಅವರಲ್ಲಿ ಬುದ್ಧಿಯ ಕೆಲಸಕ್ಕಿಂತ ಭಾವಗಳ ಕೆಲಸ ಹೆಚ್ಚೆನ್ನಬಹುದು.

ಮುಕ್ತಾಯಕ್ಕ ಅವರ ಕವನದ ನಾಯಕಿ ಕಾಡುಹಕ್ಕಿ ಚುಕ್ಕಿನೆಲ ಎಲ್ಲವನ್ನು ಎದೆ ತುಂಬಿ ನೋಡುತ್ತೇನೆ/ಬದುಕುವುದೇ ನಿಜವೆಂದಾಗ ಚೆಂದವಾಗಿರಲು ಕಲಿತಿದ್ದೇನೆ ಎಂಬ ನಿರ್ಧಾರಕ್ಕೆ (ಜಗತ್ತು ತನ್ನನ್ನು ತಾನು ಇರುವ ಹಾಗೆ ಒಪ್ಪಿಕೊಳ್ಳದೆ ಇರುವಾಗ) ಬರುತ್ತಾಳೆ. ಆದರೆ ಪ್ರತಿಭಾ ಅವರ ಒಂದು ಕವಿತೆಯಲ್ಲಿ ನಾಯಕಿ ಅನುಭವಗಳಿಂದ ಕಲಿತ ಪಾಠದಿಂದ ತೆಗೆದುಕೊಳ್ಳುವ ತೀರ್ಮಾನ,

'ಇನ್ನು ಮುಂದೆ
ರೇಷ್ಮೆ ಉಡುವುದಿಲ್ಲ ಹಿತವಾಗಿ
ಸುತ್ತಿಕೊಳ್ಳುವುದಿಲ್ಲ ಹೂವಿನೆಸಳಿನಂತಹ ಸೀರೆ
ಸವಕಲು ಮಾಸಲು ಯಾವುದಾದರೂ ನೋಡುವುದಿಲ್ಲ.

ಶತಮಾನಗಳ ನೀರು ಬದಲಿಸುವುದಿಲ್ಲ
ಶ್ರಾವಣದ ಮಳೆ ಸದ್ದು ಗ್ರೀಷ್ಮದ ಉದುರುವ ಎಲೆಯ
ಅಸಹಾಯ ಬೇಸಿಗೆಯ ಸೂರ್ಯನ ಕಾವು ಹೊಸತಲ್ಲ
ಒರಟು ಕಾಂಡಕ್ಕೆ ಕೆನ್ನೆ ಉಜ್ಜುತ್ತೇನೆ
ಬರಿಗಾಲಲ್ಲಿ ಬಿಸಿ ಮರಳ ಮೇಲೆ ನಡೆದು ಬಿಡುತ್ತೇನೆ.
ಪಂಚಾಗ್ನಿ ತಪಸ್ಸಿನಲ್ಲಿ ಬೇಯುತ್ತೇನೆ
ಉರಿದುರಿದು ಇಲ್ಲವಾಗುತ್ತೇನೆ
ಇನ್ನು ಮುಂದೆ
ಬೆಂಕಿಯ ಕೊನೆ ಬೂದಿ'[5] (ಇನ್ನು ಮುಂದೆ) ಇದಾಗಿದೆ.

ಮುಕ್ತಾಯಕ್ಕ ಅವರ ನಾಯಕಿ ಎದೆ ತುಂಬಿಕೊಳ್ಳುವ ಅನುಭವಗಳಿಗೆ ಒಡ್ಡಿಕೊಂಡರೆ, ಪ್ರತಿಭಾ ಅವರ ನಾಯಕಿಯ ಹೃದಯ ಭಗ್ನತೆಯತ್ತ ಮುಖ ಮಾಡಿದೆ. ಪ್ರತಿಭಾ ಬಳಸುವ ಪ್ರತಿಮೆಗಳ ಸಂಕೀರ್ಣತೆ ಮುಕ್ತಾಯಕ್ಕನವರ ಕವಿತೆಗಳಲ್ಲಿ ಕಾಣಸಿಗುವುದಿಲ್ಲ. ಸಾಮಾಜಿಕ ಕಳಕಳಿಯು ಕೂಡ ಮುಕ್ತಾಯಕ್ಕ ಅವರ ಕವಿತೆಗಳ ಮುಖ್ಯ ಕಾಳಜಿಯೇ ಆಗಿದೆ.

'ಎಲ್ಲಿ ನೋಡಿದರೂ ದ್ವೇಷದ ಹಿಮಪಾತ, ಸಿಡಿಗುಂಡಿನ ಬೆಂಕಿಮಳೆಯು
ಒಬ್ಬರನ್ನೊಬ್ಬರು ಗುರುತಿಸದ ಅಪರಿಚಿತ ಬಾಳನ್ನು ಬದುಕಿದ್ದೇವೆ.
ಬೇಸಗೆಯ ಚಂದ್ರನನ್ನು, ಸುಂದರ ಸಂಜೆಗಳನ್ನು ಮರೆತುಬಿಟ್ಟಿರುವೆವು
ಎಲ್ಲವನ್ನು ಹಣದಿಂದಳೆಯುವಂಥ ಹೀನ ಬದುಕನ್ನು ಬದುಕಿದ್ದೇವೆ'[6]
(ಗಝಲ್ 13)

ಎಂಬ ರೀತಿಯ ಗಜಲುಗಳನ್ನು ಕಾಣಬಹುದು.

ಹೇಮಾ ಪಟ್ಟಣಶೆಟ್ಟಿ ಅವರ 'ಕಣ್ಣುಗಳಲಿ ಕನಸು ತುಂಬಿ' ಕವನ ಸಂಕಲನದ ಕವಿತೆಗಳನ್ನು ಗಮನಿಸಿದಾಗ ಅವರ ಕೌಟುಂಬಿಕ ಜೀವನದ ಬಗೆಗಿನ ಪ್ರೀತಿ, ಹೆಣ್ಣಿನ ಸಮಸ್ಯೆಗಳನ್ನು ಕುರಿತ ಕಾಳಜಿ, ಹಾಗೂ ಸಾಮಾಜಿಕ ಕಾಳಜಿಗಳು ಮುಖ್ಯವಾಗಿ ಕಂಡುಬರುತ್ತವೆ.

'ಹೂ ಮಗಳಿಗೊಂದು ಹಾರೈಕೆ', ಕವಿತೆಯಲ್ಲಿ ಕವಿ ತನ್ನ ಮಗಳಿಗೆ,

'ಇಂದು ನಿನಗೆ ಕೊಡುವುದು
ನಾ ಪಟ್ಟ ಪಾಡುಗಳ ಬಳುವಳಿ ಮಾತ್ರ
ನೋವು ಹತಾಶೆ, ಉರಿವ, ಜ್ವಾಲೆಗಳ
ತೆಕ್ಕೆಗೆ ತಳ್ಳುತ್ತಲಿರುವೆ ನಿನ್ನ
ಧೈರ್ಯಗೆಡದಿರು ಮಗಳೇ,
ಸನ್ನದ್ಧಳಾಗು
ಈ ನೆಲದ ಬಡತನ, ಜಾತಿ, ಅಸಮತೆಯ ಬೇರು
ಕಿತ್ತೆಸೆಯಲು
ಹೋರಾಟ ನಿನ್ನದಾಗಿರಲಿ
ಶಾಂತಿ ಅಹಿಂಸೆಯ ನೇರಮಾರ್ಗ'.[7]

ಹೆಣ್ಣಿನ ಸಮಸ್ಯೆಗಳನ್ನು ಧೈರ್ಯದಿಂದ ಎದುರಿಸಲು ಕರೆಕೊಡುವ ಕವಿ ಸಮಾಜದ ಇತರ ಸಮಸ್ಯೆಗಳಿಗೆ ಮಗಳು ಸ್ಪಂದಿಸಲು, ಹೋರಾಡಲು ಸಿದ್ಧವಾಗಿರಬೇಕೆಂದು ಹೇಳಿಕೊಡುತ್ತಾಳೆ. ಗಾಂಧಿಯ ಮಾರ್ಗವನ್ನು ಅದಕ್ಕಾಗಿ ಅನುಸರಿಸಬೇಕೆಂದು ಹೇಳುತ್ತಾಳೆ. ಪ್ರತಿಭಾ ಅವರು ಮಗಳನ್ನು ಕುರಿತು ಬರೆಯುವ ಬಗೆ ಬೇರೆಯದಾಗಿದೆ. ತನ್ನ ಆಸೆಗಳ, ಕನಸುಗಳ ನನಸಾಗಿಸುವ ತನ್ನ ಮುಂದುವರಿದ ಚೈತನ್ಯವಾಗಿ ಬರುವಂತೆ ಪ್ರತಿಭಾ ಹಾರೈಸುತ್ತಾರೆ.

'ದಳ್ಳುರಿಯ ಧಗೆ ಸೋಕದೆ ಮುಳ್ಳುತಾಕದೆ
ಯಾರ ಕಾಲ್ತುಳಿತಕ್ಕು ಸಿಗದಂತೆ
ಗಂಡಾಗದೆ, ಹೆಣ್ತನದ ಸೊನೆ ಸೋರದಂತೆ
ಹೆಣ್ಣಾಗಿ ಹತ್ತು ಜನರ ಕಣ್ಣು ತಂಪಾಗುವಂತೆ,
ಕೈಬಿಟ್ಟ ಕನಸುಗಳನ್ನೆಲ್ಲ ನನಸಾಗಿಸಿ
ನಡುವಿನ ಗೋಡೆಗಳ ಕೆಡವಿ
ನಾ ಮುಟ್ಟಲಾರದ ಗುರಿಯ ಸೇರಿ ಬಿಡು
ಏರಿಬಿಡು ನಾ ಏರಲಾರದ ಮಹಲು'[8] (ಮಗಳಿಗೆ)

ಇಲ್ಲಿ ಹೊರಗಿನ ಅಪಾಯಗಳಿಂದ ತನ್ನನ್ನು ರಕ್ಷಿಸಿಕೊಂಡು ಬದುಕುವುದನ್ನು ಕಲಿ ಎಂದು ಕವಿ ಹರಸಿದರೆ, ಹೇಮಾ ಅವರ ಕವಿತೆಯಲ್ಲಿ ಮಗಳೇ ಅಂತಹ ದುಷ್ಟಶಕ್ತಿಗಳ ನಿರ್ಮೂಲನಕ್ಕೆ ಮುಂದಾಗಬೇಕೆಂದು ಕರೆಕೊಡುವುದನ್ನು ಕಾಣಬಹುದು.

'ಹಸು ಮಗಳ ಹಂಬಲ' ಕವಿತೆಯಲ್ಲಿ ಹೇಮಾರ ಕವಿತೆಯ ನಾಯಕಿ, ತನ್ನ ತಾಯಿ ತನ್ನನ್ನು ಬೆಳೆಸಿರುವ ರೀತಿಯಿಂದಾಗಿ ತನ್ನ ಬದುಕಿನಲ್ಲಿ ತನಗೆ ಶೋಷಣೆಯ ಸಂದರ್ಭಗಳು ಬಂದಾಗ ಪ್ರತಿಭಟಿಸುವ ಶಕ್ತಿ ಇಲ್ಲದೇ ಹೋದುದರ ಬಗೆಗೆ ತಾಯಿಯನ್ನು ಕಾರಣ ಮಾಡಿ ಪ್ರಶ್ನಿಸುವುದನ್ನು ಕಾಣಬಹುದು.

'ಅವ್ವಾ,
ನನ್ನ ದೇಹದ ತುಂಬ
ಮೆತ್ತನ್ನ ಕುತನಿ ಮನಸ್ಸನ್ನೇ
ಬಿತ್ತುವಾಗ ನಿನಗೆ
ಏನೂ ಅನ್ನಿಸಲಿಲ್ಲವೇ?''

ಎಂದು ಮುಂದುವರಿದು,

'ಕಾಲಕ್ಕೆ ತಕ್ಕಂತೆ ಮೌಲ್ಯಕ್ಕೆ
ಬಣ್ಣಗಳು ಬೆಲೆಗಳು
ಈ ತತ್ವ–ನೀತಿ
ಇರಲಿಲ್ಲ ನಿನ್ನ ಪಠ್ಯಕ್ರಮದಿ
ಅನುದಿನದ ಅನೂಚಾನ
ಸ್ತ್ರೀತ್ವದ ಹೂಬೇರನರೆದು
ತಿಕ್ಕಿ ತಿಕ್ಕಿ ಹಾಕಿದಿ ಗುಟ್ಟಿ
ನಿನ್ನ ಗಂಡು ಮಕ್ಕಳಿಗೆ ಮಾತ್ರ
ಪೌರುಷದ ಅಶ್ವಗಂಧೀ ಬೇರು
ಕುಡಿಸಿದ್ದು
ನೋಡುತ್ತಿದ್ದೆ ನಿನ್ನ ಪಕ್ಕ
ಬಿಟ್ಟು ಕಣ್ಣು ಪಿಳಿ ಪಿಳಿ'[10]

ಹೀಗೆ ಸಾಂಪ್ರದಾಯಿಕ ವಾತಾವರಣದಲ್ಲಿ ತನ್ನನ್ನು ಬೆಳೆಸಿದ ತಾಯಿಯ ರೀತಿಯನ್ನು ಟೀಕಿಸಿ, ತನ್ನನ್ನು ತಾನೇ ಕಂಡುಕೊಳ್ಳುವ ಮನಸ್ಸು ಮಾಡುವುದನ್ನು ಕಾಣಬಹುದು.

'ಈ ಬದುಕು ನನಗೆ
ಕಲಿಸಿದ ಪಾಠ:
ನಿನ್ನಂತೆ ಆಗದಿರುವುದು
ಮತ್ತೆ ತಿಳಿ
ಯುವುದು ನನ್ನೊಳಗಿನೊಳಗನ್ನು
ಬೆಡಗು ಬೆಳಗನ್ನು'[11]

ಪ್ರತಿಭಾ ಅವರು ತಾಯಿಯೊಂದಿಗೆ ಸಂವಾದ ನಡೆಸುವಾಗ ಆಕೆಯನ್ನು ತನ್ನನ್ನು ಬೆಳೆಸಿದ ರೀತಿಗಾಗಲಿ, ತಾನು ಈಗಿರುವ ರೀತಿಗಾಗಲಿ ಪ್ರಶ್ನಿಸುವುದೂ ಇಲ್ಲ, ಟೀಕಿಸುವುದೂ ಇಲ್ಲ. ಅವರಿಗೆ ಹೆಣ್ಣು ತನ್ನನ್ನು ತಾನು ಕಟ್ಟಿಕೊಳ್ಳಬಹುದೆಂಬುದರಲ್ಲಿಯೇ ಹೆಚ್ಚು ನಂಬಿಕೆ. ತನ್ನ ಜೀವನ ತಾನು ರೂಪಿಸಿಕೊಂಡಂತೆ ಇದೆ ಎಂಬುದರಿಂದಲೇ ತನ್ನ ಸುತ್ತಣ ಕ್ರಿಯೆಗಳಿಗೆ ತಾನೇ ಪ್ರತಿಕ್ರಿಯೆ ನೀಡಬಯಸುತ್ತಾಳೆ.

ಹೆಣ್ಣನ್ನು ಹೇಮಾ ಅವರು ವಿವರಿಸುವ ಬಗೆ ವೈಶಿಷ್ಟ್ಯಪೂರ್ಣವಾದುದಾಗಿದೆ. ಹೆಣ್ಣು ಪ್ರಕೃತಿಯಂತೆಯೇ ಪುರಷನನ್ನು ದ್ವಂದ್ವದಲ್ಲಿ ಸಿಲುಕಿಸಬಲ್ಲವಳಾಗಿದ್ದಾಳೆ ಎಂಬುದನ್ನು ಈ ಕವಿತೆ ಸೂಚಿಸುತ್ತದೆ:

'ಹೆಣ್ಣು
ನಿಜದ ಅರ್ಥದಲ್ಲಿ
ಈ ಪ್ರಪಂಚದ ಏಕಮಾತ್ರ ಪುರುಷ ಸತ್ಯ
ಆದ್ದರಿಂದಲೇ ಪುರುಷ
ಮಿಥ್ಯ ಸತ್ಯಗಳ ನಡುವೆ ಇವಳನ್ನು
ಸಿಲುಕಿಸಿದ ಬಗೆಯನ್ನು
ಇವಳು ಎತ್ತಿ ಹಿಡಿದಿದ್ದಾಳೆ'[12] (ಚಿತ್ರ)

ಪುರುಷನಿಗೆ ಪ್ರಕೃತಿಯಲ್ಲಿ ಉಳಿದುದೆಲ್ಲವೂ ನಿಗೂಢವಾಗಿ ಕಾಣುವಾಗ ಹೆಣ್ಣು ಮಾತ್ರ ತನ್ನ ಕಣ್ಣ ಮುಂದಿರುವ ಸತ್ಯವಾಗಿ ಕಾಣುತ್ತಾಳೆ. ಆದ್ದರಿಂದಲೇ ಅವಳನ್ನು ತನಗೆ ಸರಿಕಂಡಂತೆ ಇರಿಸಿದ್ದಾನೆ. ಆದರೆ ಈ ಇರಿಸುವಿಕೆಯಲ್ಲಿ ತನ್ನ ಮುಂದಿರುವ ದ್ವಂದ್ವವನ್ನು ಹೆಣ್ಣು ಪ್ರತಿಫಲಿಸುತ್ತಿದ್ದಾಳೆ. ಹೆಣ್ಣು ಒಮ್ಮೆ ನಿಗೂಢವಾಗಿಯೂ ಮತ್ತೊಮ್ಮೆ ಬಯಲಾಗಿಯೂ ಕಾಣುತ್ತಾಳೆ.

ಇದನ್ನು ಕವಿ

'ಕಾಡಿದ್ದಾಳೆ
ಪಾಡಿದ್ದಾಳೆ ಹಾಡಿದ್ದಾಳೆ ಹಾಡು
ತಾನಾಗಿ ಬದುಕಿನ ಕಾಡುಗಳ ಮಧ್ಯೆ
ಜೀವನದ ನಾಡು ನಿಲಿಸಿದ್ದಾಳೆ
ಗತಿ-ವಿಧಿಗಳ ಕ್ಯಾನವಾಸಿನ ಮೇಲೆ
ರಂಗು ರಂಗಿನ ಅಂದದ ಚಿತ್ರವಾಗಿದ್ದಾಳೆ.[13]

ಎಂದು ಹೆಣ್ಣೇ ಪುರುಷನ ಜೀವನವನ್ನು ಕಟ್ಟುವವಳಾಗಿ ಕಾಣುತ್ತಾಳೆ. ಪ್ರಕೃತಿಯ ಸಮೀಪ ಹೆಣ್ಣನ್ನು ಇಟ್ಟಿರುವುದನ್ನು ಈ ಕವಿತೆಯಲ್ಲಿ ಗುರುತಿಸಬಹುದು.

ಪ್ರತಿಭಾ ಅವರ ಕವಿತೆಗಳಲ್ಲಿ ಹೆಣ್ಣನ್ನು ಕಾಡಿಗೆ, ಕಾರ್ಗಿಲ್ ಸಮರಕ್ಕೆ, ಹೆಣ್ಣಿನ ಹೃದಯವನ್ನು ಸ್ಮಶಾನಕ್ಕೆ ಹೋಲಿಸಿ ಅವಳ ನಿಗೂಢ ಮುಖಗಳನ್ನು ಪರಿಚಯಿಸಿರುವುದನ್ನು ಹೇಮಾರ ಕವಿತೆಗಳೊಂದಿಗೆ ಹೋಲಿಸಬಹುದು.

'ದಿನಾ ನೋಡುತ್ತೀಯ
ನಾನು ಹೆಣ್ಣು ಅಂತ ತಿಳಿದಿದ್ದೀಯಾ?
ಅಲ್ಲ, ನಾನೊಂದು ಕಾಡು.
ಹುಟ್ಟುವಾಗ ನನ್ನ ತಲೆಯೊಳಗೆ
ಹುಲಿಯ ಗರ್ಜನೆ ತುಂಬಿ
ನೆಲಕ್ಕಿಳಿಸಿದಳು ನನ್ನ ತಾಯಿ.
ಬೆಳೆಯುವಾಗ ಕರಡಿಯ ನಡೆ
ಕಲಿಸಿದ ತಂದೆ
ನನ್ನ ಹೊಟ್ಟೆಯೊಳಗೆ ಘೇಂಡಾಮೃಗ
ಎದೆಯೊಳಗೆ ಕುಣಿಯುವ ಹುಲ್ಲೆ'[14] (ಹೆಣ್ಣು-ಕಾಡು)

ಹೀಗೆ ತನ್ನನ್ನು ವಿವರಿಸಿಕೊಳ್ಳುವ ನಾಯಕಿ ಕವನದ ಕೊನೆಗೆ, ಗಂಡಿನ ಮುಂದೆ ಪ್ರೀತಿಯನ್ನು ಬೇಡುವಾಗ ಅವನು ಅದನ್ನು ನೀಡದುದರ ಬಗೆಗೆ ಹತಾಶೆಯನ್ನು ವ್ಯಕ್ತಪಡಿಸುತ್ತಾಳೆ.

'ನೀನು ಎರಡೂ ತೋಳು ಚಾಚಿದರೆ ಬರೀ ಗಾಳಿ
ನಾನು ಎದೆ ತೆರೆದರೆ ಸಂಪೂರ್ಣ ಸಾಮ್ರಾಜ್ಯ
ಆದರೂ ಮೈ ಕುಗ್ಗಿಸಿ ಹಿಡಿಯಾಗಿಸಿ
ನಿನ್ನ ಮುಂದೆ ನಿಂತು ಬೇಡುವಾಗ
ನಿನಗೆ ದೃಷ್ಟಿಮಂದ
ನನ್ನ ಸೀರೆಯ ಬಣ್ಣ ಹೊರತು
ಬೇರೇನೂ ಕಾಣಿಸುವುದಿಲ್ಲ'[15] (ಹೆಣ್ಣು-ಕಾಡು)

ಹೇಮಾ ಅವರ ಕವನಗಳ ನಾಯಕಿಗೆ ಭವಿಷ್ಯದಲ್ಲಿ ಆಶಾವಾದವಿದೆ. ಭರವಸೆಯಿದೆ. ಕನಸುಗಳನ್ನು ಎಂತಹ ಸಂದರ್ಭದಲ್ಲಿಯೂ ಉಳಿಸಿಕೊಳ್ಳುವ ಚೈತನ್ಯವಿದೆ.

'ಕನಸು ಸಾಯುವುದಿಲ್ಲ
ಕಳಿತರೂ ಕೊಳೆತರೂ ಏನಾದರೂ
ಕನಸುಗಳಿಗುಂಟು ಮತ್ತೆ ಚಿಗುರುವ ಶಕ್ತಿ'[16] (ಕನಸು ಸಾಯುವುದಿಲ್ಲ)

ಪ್ರತಿಭಾ ಅವರಲ್ಲಿ ಈ ಆಶಾವಾದ ಹೆಣ್ಣಿನ ಸ್ವಂತದ ಶಕ್ತಿಯಿಂದ ರೂಪುಗೊಳ್ಳುವಂತದ್ದಾಗಿದೆ. ಕನಸಿನ ಹಂಗಿನಲ್ಲಿ ಜೀವಿಸುವ ಹೆಣ್ಣು ಇವರಲ್ಲಿ ಕಂಡರೂ ವಿಷಾದದ ಹಿನ್ನೆಲೆಯಿರುವ ಕನಸಿದೆ.

ಹೇಮಾ ಅವರ ಈ ಕವನ ಸಂಕಲನದ ಇತರ ಕವಿತೆಗಳು ಅಸಮಾನತೆ, ಧರ್ಮ, ಜಾತಿ, ಭಾಷೆಗಳನ್ನು ಕುರಿತಾದ ಭಿನ್ನತೆಗಳು ಮಾಯವಾಗಿ ಸಾಮರಸ್ಯದ, ಸಮಾನತೆಯ ಬದುಕು ಎಲ್ಲರದಾಗಬೇಕೆಂಬುದನ್ನು ಆಶಿಸುತ್ತವೆ.

ಶೈಲಜಾ ಉಡಚಣ ಅವರು ತಮ್ಮ ಕಾವ್ಯಾಭಿವ್ಯಕ್ತಿಯಲ್ಲಿ ಮಹಿಳೆಯೂ ಸೇರಿದಂತೆ ಇತರ ಸಾಮಾಜಿಕ, ಸಾರ್ವತ್ರಿಕ ವಿಚಾರಗಳ ಬಗೆಗೆ ತಮ್ಮ ಅನುಭವಗಳನ್ನು ವ್ಯಕ್ತಪಡಿಸಿದ್ದಾರೆ. 'ಕಾಲ ದೂರವಿಲ್ಲ' ಕವಿತೆಯು ಶೋಷಿತರು, ದಮನಿತರು, ಬಡವರುಗಳಿಗೆಲ್ಲ ಒಳ್ಳೆಯ ಕಾಲವೊಂದು ಬರುವುದರ ಬಗೆಗೆ ಆಶಾವಾದವನ್ನು ವ್ಯಕ್ತಪಡಿಸಿದ್ದಾರೆ.

'ಇಲ್ಲಿ ಒಬ್ಬೊಬ್ಬ ದಲಿತನೂ  
ಅಂಬೇಡ್ಕರ್ ಆಗಬೇಕಿದೆ  
ಒಬ್ಬೊಬ್ಬ ಶೋಷಿತನೂ ಗಾಂಧಿಯಾಗಬೇಕಿದೆ.  
ನೂರು ಬಿರುಕು, ತಪ್ಪಿದ ಮೂಲಗಳನ್ನು ಸರಿಪಡಿಸಬೇಕಾಗಿದೆ.  
ಕಾಲ ಹದಗೊಂಡಿದೆ, ಕುದಿಯುತ್ತಿದೆ  
ಸ್ಫೋಟವಾಗಿಯೋ, ಶಾಸನವಾಗಿಯೋ  
ಬರುತ್ತಿದೆ ದೂರವಿಲ್ಲ ದೂರವಿಲ್ಲ'[17] (ಕಾಲ ದೂರವಿಲ್ಲ)

ಈ ಪರಿವರ್ತನೆಗೆ ಪ್ರತಿಯೊಬ್ಬ ವ್ಯಕ್ತಿಯೂ ಅಂಬೇಡ್ಕರ್, ಗಾಂಧಿಯಂತೆ ಆಗಬೇಕಾಗಿದೆ ಎಂದು ಕರೆ ನೀಡುವ ರೀತಿ ಕಂಡುಬರುತ್ತದೆ.

'ಹಿಮಾಲಯದ ದಾಹ', ಕವಿತೆ ಹೆಣ್ಣಿನ ಮಾನವ ಶಕ್ತಿಯನ್ನು ಮರೆತು ಆಕೆಯನ್ನು ಅಬಲೆ, ಅಶಕ್ತೆ ಎಂದೆಲ್ಲಾ ಭಾವಿಸುವ ಜನರಿಗೆ ಅವಳ 'ಇರುವಿಕೆ'ಯನ್ನು ಇನ್ನೊಂದು ಬಗೆಯಲ್ಲಿ ವಿವರಿಸುತ್ತದೆ.

'ಹೋಲಿಸುವವರು ಹುಚ್ಚರು ಉನ್ಮತ್ತರು  
ಆಕೆಯೊಮ್ಮೆ ಮರವಾಗುವುದನ್ನು  
ಮರೆತು ಬಿಡುತ್ತಾರೆ'.[18]

ಹೆಣ್ಣನ್ನು ಹೂವು, ತಾರೆ, ಚಂದ್ರಮ, ಪೃಥ್ವಿಗಳಿಗೆ ಹೋಲಿಸುವವರಿಗೆ ಇವುಗಳ ಮತ್ತೊಂದು ರೂಪವನ್ನು ದರ್ಶನ ಮಾಡಿಸುತ್ತಾ ಆಕೆಯೂ ಕೂಡ 'ಮಾನವಿ' ಎಂಬುದನ್ನು ಸ್ಪಷ್ಟಪಡಿಸಲೆತ್ನಿಸುತ್ತಾರೆ.

ಶೈಲಜಾ ಅವರ 'ಇವರು ಪುರುಷೋತ್ತಮರು' ಕವಿತೆಯಲ್ಲಿ ಹೆಣ್ಣನ್ನು ದೇವತೆಗೆ ಅಥವಾ ದೈವತ್ವದ ಪಟ್ಟಕ್ಕೆ ಏರಿಸಿ ಆಕೆಯನ್ನು ವಾಸ್ತವದಲ್ಲಿ ಹೀನವಾಗಿ ನಡೆಸಿಕೊಂಡುದರ ಬಗೆಗೆ 'ಇವರು ಪುರುಷೋತ್ತಮರು' ಎಂದು ವ್ಯಂಗ್ಯವಾಡಿದ್ದಾರೆ. ಪುರಾಣದಲ್ಲೂ, ಇಂದಿನ ಸಾಮಾಜಿಕ ಜೀವನದಲ್ಲೂ ಹೆಣ್ಣಿಗೆ ಕೊಟ್ಟಿರುವೆವೆಂದು ಹೇಳಿಕೊಂಡ ಸ್ಥಾನವನ್ನು ನಿಜದಲ್ಲಿ ನೀಡಲಿಲ್ಲವೆಂಬುದನ್ನು ಈ ಕವಿತೆ ಗುರುತಿಸುತ್ತದೆ.

'ಗೃಹ ಸಾಮ್ರಾಜ್ಞಿ ಎಂದರು
ಮಾನಕ್ಕಾಗಿ ಮನೆ ಹಂಡತಿಯನ್ನು ಸಂತೆಯಲ್ಲಿ ಮಾರಿದರು
ಸತಿ ಸಾವಿತ್ರಿ ಎಂದರು
ನೀರಿಗಾಗಿ ಊರಿಗಾಗಿ ಬಸುರಿಯರ ಬಲಿಕೊಟ್ಟರು
ಪುಣ್ಯಸ್ವರೂಪಿಣಿ ಪುತ್ರಿಯೆಂದರು
ಸ್ವಂತಕ್ಕಾಗಿ ಕರುಳಬಳ್ಳಿಯನ್ನು ಒತ್ತೆ ಇಟ್ಟರು'[19]

'ನನ್ನಂಥವರು' ಕವಿತೆಯಲ್ಲಿ ಶೈಲಜಾ ಅವರು ಹೆಣ್ಣು ಮನೆಯ ಒಳಗೂ, ಹೊರಗೂ ಸಂಬಂಧಗಳ ನೆಲೆಯಲ್ಲಿ ಹಾಗೂ ಉದ್ಯೋಗದ ಹೊಣೆಗಾರಿಕೆಯಲ್ಲಿ ಸಮತೋಲನವನ್ನು ಕಾಯ್ದುಕೊಳ್ಳಲು ಹೆಣಗಬೇಕಾದ ಪರಿಯನ್ನು ವಿವರಿಸುತ್ತದೆ. ಇದು ಆಧುನಿಕ ಉದ್ಯೋಗಸ್ಥ ಮಹಿಳೆಯ ಜೀವನದಲ್ಲಿ ಹುಟ್ಟಿಕೊಂಡಿರುವ ಹೊಸ ಆತಂಕಗಳನ್ನು ಹೇಳುತ್ತದೆ.

'ಪಾಪಪ್ರಜ್ಞೆ, ಅಪರಾಧಿ ಮನಸ್ಸು?
ಆತಂಕಗಳ ಅವಘಡದ ತಿರುಗುಣಿಯ
ಸುತ್ತು ತಳಕಾಣದ ಮೇಲೇಳದ
ತರಗೆಲೆಯ ಗತ್ತು ಈ ಬದುಕು
ನನಗೆ ನನ್ನಂಥವರ ಪಾಲಿಗೆ'[20]

ಎಂದು ಗಂಡ, ಮಕ್ಕಳು, ಅತ್ತೆ, ಮಾವ, ಮೈದುನರೇ ಮುಂತಾದವರೊಂದಿಗೆ ಆಕೆ ನಿಭಾಯಿಸಬೇಕಾದ ಜವಾಬ್ದಾರಿಗಳು ಹಾಗೂ ಉದ್ಯೋಗದಲ್ಲಿ ಕರ್ತವ್ಯದ ಹೊಣೆಗಾರಿಕೆ ಹಾಗೂ ತನ್ನವೇ ಆದ ಆಸಕ್ತಿ, ಅವಶ್ಯಕತೆಗಳನ್ನು ಪೂರೈಸಿಕೊಳ್ಳುವುದು ಇವುಗಳ ಜಂಜಾಟದಲ್ಲಿ ಒಂದನ್ನು ಮರೆತು ಇನ್ನೊಂದರಲ್ಲಿ ತೊಡಗಿದರೂ ಅಪರಾಧಿ ಭಾವ ಕಾಡುವ ರೀತಿಯನ್ನು ಹೇಳಿದ್ದಾರೆ.

ಪ್ರತಿಭಾ ಅವರಲ್ಲಿ ಹೆಣ್ಣನ್ನು ಪುರಾಣದ ಸ್ತ್ರೀಯರ ನೆಲೆಯಲ್ಲಿ ವಿವರಿಸಿಕೊಳ್ಳುವಾಗ ಅವರನ್ನು ವರ್ತಮಾನದಲ್ಲಿಟ್ಟು ವಿವರಸಿಕೊಂಡು ವ್ಯಂಗ್ಯದ ಮೂಲಕ, ವಿಡಂಬನೆಯ ಮೂಲಕ ತಮ್ಮ ನಿಲುವನ್ನು ವ್ಯಕ್ತಪಡಿಸುತ್ತಾರೆ. 'ಕಾರಣ', 'ಹೆಣ್ಣಿನ ಹೃದಯವೊಂದು ಸ್ಮಶಾನ', 'ನತ್ತು' ಇಂತಹ ಕವಿತೆಗಳನ್ನು ಇಲ್ಲಿ ಉದಾಹರಿಸಬಹುದು. ಕಾರಣ ಕವಿತೆಯಲ್ಲಿ ಸೀತೆಯನ್ನು ಬಿಟ್ಟು ಹೋಗಿದ್ದ ರಾಮ, ಲಕ್ಷ್ಮಣರು ಹಿಂದಿರುಗುವ ವೇಳೆಗೆ ಸೀತೆಯನ್ನು ರಾವಣ ಕದ್ದೊಯ್ದಾಗಿತ್ತು. ಆದರೆ ರಾವಣನಿಂದ ಸೀತೆಯನ್ನು ಹಿಂದಕ್ಕೆ ಕರೆತಂದ ಮೇಲೂ ರಾಮ ಯಾರದೋ ಮಾತಿಗೆ ಅವಳನ್ನು ಕಾಡಿಗಟ್ಟಿದ. ಆದರೆ ಸೀತೆ ಹೇಳುತ್ತಾಳೆ. ಹಾಗೆ ಅನೈತಿಕವೆಂದು ನೀವು ಭಾವಿಸುವ ಸಂಬಂಧದ ಪಾಪವಿರುವುದು ನಿಮಗೇ ಹೊರತು ನನಗಲ್ಲ ಎಂದು

ಕ್ಲಿಕ್ ಎನ್ನಿಸಿದಳು ಸೀತೆ
ಪಾಪವಿರುವುದು ನಿನಗೆ ನನಗಲ್ಲ
ಒಮ್ಮೆ ದಾಟಿದ ಮೇಲೆ ಗೆರೆ ತಡೆಯುವುದಿಲ್ಲ
ಲಕ್ಷ್ಮಣನ ಸುಳಿವೇ ಇಲ್ಲ
ಇನ್ನು ರಾಮನ ಮಾತೇಕೆ?[21]

ಎಂದು ಅಪವಾದಗಳನ್ನು ಬೇಕೆಂದಾಗ ಹೊರಿಸುವ, ಬಿಡುವ ಈ ಪುರುಷ ಪ್ರಧಾನ ಸಮಾಜಕ್ಕೆ ಇಂತಹ ಸಂಬಂಧಗಳ ಪಾಪವಿದೆಯೇ ಹೊರತು ತನಗಲ್ಲ ಎಂಬುದನ್ನು ಸೀತೆ ಸೂಚಿಸುತ್ತಾಳೆ.

ವೈದೇಹಿಯವರ ಮುಖ್ಯ ಕವನಸಂಕಲನಗಳಲ್ಲಿ ಒಂದಾದ 'ಬಿಂದು ಬಿಂದಿಗೆ'ಯ 'ಅಡುಗೆ ಮನೆಯ ಹುಡುಗಿ' ಕವಿತೆ ಹೆಣ್ಣಿನ ಸ್ವಾತಂತ್ರ್ಯದ ಬಯಕೆಯನ್ನು, ಆ ಸ್ವಾತಂತ್ರ್ಯ ದೊರೆತಾಗಲೂ ಬಂಧನ ದೂರಾಗುವುದಿಲ್ಲವೇನೋ ಎಂಬ ಆತಂಕವಿದ್ದರೂ ಅದಕ್ಕಾಗಿಯೇ ಹಂಬಲಿಸುವ ಹುಡುಗಿಯನ್ನು ಕಾಣಬಹುದು.

'ಇರಬಹುದು ಈ ವಿಮಾನದೊಳಗೂ ಒಬ್ಬ
ಹಗಲು ವೇಷದ ಯಜಮಾನ
ಇರುವಂತೆ ಪ್ರತಿ ಪ್ರಾಣಿಗೂ ಕದಿಯುವ ಮತ್ತು
ಆಳುವ ಜಾಯಮಾನ
ಮತ್ತೆ ಬರಬಹುದು ಪುಷ್ಪಕದ ರೆಕ್ಕೆ ಬಡಿಯುತ್ತಾ
ಮಾಡನ್ನು ಸೀಳಿ
ಏಣಿ ಕೆಳಗಿಳಿಸಿ

ಸಾಂಬ್ರಾಣಿ ಸಿಪ್ಪೆ ಬಿಡಿಸುತ್ತಿರುವ ತನ್ನ
ಎತ್ತಿ ಒಯ್ದು ಸಾಮ್ರಾಜ್ಞಿ ಮಾಡಿ
ರಾಮ ರಾಮಾ! ಲಂಕೆಗೋ, ಅಯೋಧ್ಯೆಗೋ?
ಛೇ! ಕೇಳಿ ಹಳಸಿದ ಅವವೇ ಊರುಗಳು ಹೆಸರುಗಳು,
ಕಂಡಿದ್ದೀರಾ ಯಾರೂ ಕಾಣದಂಥಾ ಲೋಕ?
ಹಾರಲಲ್ಲಿಗೆ – ಆಜ್ಞೆ ಮಾಡುವವಳು ತಾನು'[22]

ಇಲ್ಲಿ ಹುಡುಗಿಗೆ ಅಡುಗೆ ಮನೆಯ ನಾಲ್ಕು ಗೋಡೆಗಳ ಒಳಗೇ ಕಾಲ ಕಳೆಯಬೇಕಾದ ತನ್ನ ಸ್ಥಿತಿ ಬದಲಾಗಿ ಇಲ್ಲಿಂದ ಬಿಡುಗಡೆ ಪಡೆದು ಸ್ವತಂತ್ರವಾಗಲು ಹಾತೊರೆಯುವ ರೀತಿ ಕಂಡುಬರುತ್ತದೆ. ಆದರೆ ಅನಂತರವೂ ಅವೇ ಹಳೆಯ ಪಾತ್ರಗಳಲ್ಲಿಯೇ ಬದುಕಬೇಕಾಗುವುದೋ ಏನೋ ಎಂಬ ಆತಂಕವಿದೆ. ನೋಡಬಾರದು ಚೀಲದೊಳಗನು ಕವಿತೆಯಲ್ಲಿ ಹೆಂಗಸರ ವ್ಯಾನಿಟಿ ಬ್ಯಾಗಿನೊಳಗಿನ ಲೋಕವು ಹೆಣ್ಣಿನ ಮನೋಲೋಕವನ್ನು ಪ್ರತಿನಿಧಿಸುತ್ತಿರುವುದನ್ನು ಹೀಗೆ ವಿವರಿಸಿದ್ದಾರೆ:

'ಬಾಲ್ಯ ಯೌವನ ವೃದ್ಧಾಪ್ಯ ನೆರಳುಗಳ
ಸೇರಿಕೊಂಡಿರಬಹುದು ಆ ಕೋಶದಲ್ಲಿ
ಗಾರ್ಹಸ್ಥ್ಯ ವೇಶ್ಯಾ ಅಭಿಸಾರ ವಾಸನೆಗಳು
ಧರ್ಮ ಲಕ್ಷಣ ಅವಸ್ಥಾಂತರ ವೇಷದಲ್ಲಿ

ಒಂದಕ್ಕೊಂದಕ್ಕೆ ಅರ್ಥಾರ್ಥವಿಲ್ಲದೆಯೂ
ಇಲ್ಲವೇ ಹಲವು ಜೊತೆಗಳು?
ಹಾಗೆಯೇ ಈ ಚೀಲದೊಳಗಿನ ಲೋಕಗಳು!'[23]
(ನೋಡಬಾರದು ಚೀಲದೊಳಗನು)

ಹೆಂಗಸರ ವ್ಯಾನಿಟಿ ಬ್ಯಾಗಿನ ಒಳಗೇನಿದೆ ಎಂಬುದನ್ನು ನೋಡಲು ಪುರುಷರು ಪ್ರಯತ್ನಿಸಬಾರದು ಎಂಬುದನ್ನು ಹೇಳುತ್ತಾ ಅದರೊಳಗೆ ಇರಬಹುದಾದ ಹಲವಾರು ವಸ್ತುಗಳನ್ನು ಅವುಗಳ ಹಿನ್ನೆಲೆಯನ್ನು ಸೂಚಿಸುತ್ತಾರೆ. ಹೆಣ್ಣಿನ ಮನೋಲೋಕವೇ ಅಲ್ಲಿ ತೆರೆದುಕೊಂಡಿರುತ್ತದೆ ಆದರೆ ಅವು ಅವಳಿಗೆ ಮಾತ್ರ ತಿಳಿದ ಸಂಗತಿಗಳು. ಅವುಗಳನ್ನು ತಿಳಿಯುವ ವ್ಯರ್ಥ ಪ್ರಯತ್ನವನ್ನು ಪುರುಷರು ಮಾಡಬಾರದು ಎಂದಿದ್ದಾರೆ.

'ತಿಳಿದವರೇ... ಹೇಳಿ' ಕವಿತೆಯಲ್ಲಿ ಕಾವ್ಯದ ಬಗ್ಗೆ ಅದು ಹೀಗೇ ಇರಬೇಕೆಂದು ಹೇಳುವವರಿಗೆ ಅವರು ಕೇಳುವ ಪ್ರಶ್ನೆ

'ಕಾವ್ಯದ ಬಗ್ಗೆ ದೊಡ್ಡಕೆ ತಿಳಿದವರೇ
ಹೇಳಿ ನನಗೆ ಕಾವ್ಯ ಗೊತ್ತಿಲ್ಲ
ತಿಳಿಸಾರು ಗೊತ್ತು' ಎಂಬುದು [24]

ತನ್ನ ತಿಳಿಸಾರಿಗೂ ಒಂದು ಹದದ ತತ್ವವಿರುವುದರಿಂದ ಅದಕ್ಕೂ ಬೆಲೆಯುಂಟು. ಒಂದು ದಿನ ಕಳೆದರೂ, ನಂಗಿದರೂ ನಂಗದಂತಿರುವ ಕೆಂಡದ ಒಲೆಯ ಮೇಲೆ ತಿಳಿಸಾರು ಹಳಸದೆ ಇದ್ದುದರ ಬಗ್ಗೆ ಅವರಿಗೆ ಹೆಮ್ಮೆ ಇದೆ. ಆದರೆ ಮಾಂಸದಡುಗೆಯುನ್ನು ಮಾಡುವ, ಬಹಳ ಘಮ್ಮೆನ್ನುವ ಭಕ್ಷ್ಯವನ್ನು ಸಿದ್ದಮಾಡುವವರಿಗೆ ಇವರು ಹೇಳುವುದು, ನಿಮ್ಮ ಕಾವ್ಯದ ದೊಡ್ಡ ನಿಯಮಗಳು ನನಗೆ ಗೊತ್ತಿಲ್ಲ ಆದರೆ ತಿಳಿಸಾರು ಗೊತ್ತು ಎಂದು. ಹೀಗೆ ಕಾವ್ಯದ ಅಭಿವ್ಯಕ್ತಿಗೆ ಸಂಬಂಧಿಸಿದಂತೆ ವೈದೇಹಿಯವರಂತೆಯೇ, ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಕವಿತೆಗಳನ್ನು ಪ್ರತಿಭಾ ಅವರು ಬರೆದಿದ್ದಾರೆ. 'ಕವಿತೆ' ಕವಿತೆಯಲ್ಲಿ

'ಕವಿತೆಯದು ಸದಾ ದುರ್ಗಮ ಮಾರ್ಗ
ಸಾಮ್ರಾಜ್ಯಗಳು ಎದ್ದು ಬಿದ್ದು
ದ್ರೋಹ ಪಿತೂರಿ ಕದನಗಳು ನಡೆದು
ಹಾಳು ಬೀಳುಗಳ ಶಿಥಿಲದ ನಡುವೆ
ಹತ್ತು ಕಣ್ಣುಗಳ ಮುಳ್ಳು ನಟ್ಟಲ್ಲೇ
ಹೆಜ್ಜೆಯಿಡಬೇಕು ಹುಟ್ಟುಡುಗೆ ತೊಟ್ಟು
ಮರೆಯಿಲ್ಲದ ಬಯಲಿದು
ನನ್ನ ಕವಿತೆಗೆ ಮುಸುಕು ತಿಳಿಯದು'[25]

ಎಂದು ಹೇಳಿಕೊಳ್ಳುತ್ತಾರೆ.

ಎಚ್.ಎಲ್. ಪುಷ್ಪ ಅವರು 'ಅಮೃತಮತಿಯ ಸ್ವಗತ' ಕವನ ಸಂಕಲನದಲ್ಲಿ ಹೆಣ್ಣಿನ ಮನಸ್ಸಿನ ವಿವಿಧ ಮುಖಗಳನ್ನು ಮೆಲುದನಿಯಲ್ಲಿಯೇ ದಾಖಲಿಸುತ್ತಾರೆ. ಪ್ರೇಮದ ಬರ್ಬರತೆ, ಆಸೆ ಆಕಾಂಕ್ಷೆ, ವಿಷಾದದಲ್ಲಿಯೂ ಒಂದು ಬಗೆಯ ಭರವಸೆ ಇವರ ಕಾವ್ಯದಲ್ಲಿ ಕಂಡು ಬರುತ್ತದೆ. 'ಪ್ರೇಮ ಸಿದ್ಧಾಂತಗಳು' ಎಂಬ ಕವಿತೆಯಲ್ಲಿ ನಾಯಕ ಲೋಕದ ಬಗ್ಗೆ ವಿಚಾರ ಮಾಡಬಲ್ಲ ಶಕ್ತಿಯುಳ್ಳವನು. ತನ್ನ ದ್ವೇಷ, ನಿರಾಸೆ, ಕಹಿಗಳನ್ನು ಮರೆಯಲು ಮುಗ್ಧ ಹೆಣ್ಣನ್ನು ಆಶ್ರಯಿಸುವ ಚಿತ್ರ ಕಾಣುತ್ತದೆ.

ಆದರೆ ಇಂಥ ಪ್ರೇಮದ ಹಿಂದೆ ಆತನು ಹೊಂದಿರುವ ನಿಲುವು, ತನ್ನ ಪ್ರೇಯಸಿಯು ಎಂದಿಗೂ ಬುದ್ಧಿವಂತಳಾಗಬಾರದು ಎಂಬುದು.

'ನೀ ಬುದ್ಧಿವಂತೆಯಾದರೆ
ನನ್ನ ಬಗ್ಗೆ ತಿರಸ್ಕಾರ ಮೂಡಿ
ಹೊಳಪು ಮಾಸುತ್ತೆ
ನಿನ್ನ ನುಣುಪು ಮುಖದ ಮೇಲೆ
ದರಿದ್ರ ಬುದ್ಧಿರೇಖೆಗಳು ಮೂಡುತ್ತೆ
ಬುದ್ಧಿಮತ್ತೆಯ ನಟಿಸಲು ಹೋಗಿ
ಮುದಿ ಸೂಳೆಯಾಗುತ್ತಾ
ಮುಖ್ಯವಾಗಿ ನನ್ನಿಂದ ದೂರವಾಗುತ್ತ'[26]

ಎಂದು ಹೆಣ್ಣಿನ, ವಿಚಾರದ ಬಲವಿಲ್ಲದ ಪ್ರೇಮವನ್ನು ಬಯಸುತ್ತಾನೆ. ಗಂಡು ಹೆಣ್ಣಿನ ಪ್ರೇಮದ ಹಿಂದೆ ಇರಬಹುದಾದ ಪ್ರೀತಿ ದ್ವೇಷದ ನೆಲೆಗಳನ್ನು ಕವಿ ಇಲ್ಲಿ ದಾಖಲಿಸುತ್ತಾರೆ.

'ಅಮೃತಮತಿ ಸ್ವಗತ' ಕವಿತೆಯಲ್ಲಿ ಹೆಣ್ಣಿನ ಮನಸ್ಸಿನಾಳದ ಮಿಡಿತಕ್ಕೆ ಹೊಂದಿಕೆಯಾಗುವ ಅಷ್ಟಾವಕ್ರನ ಸೆಳೆತದ ಹಿಂದಿನ ಅಮೃತಮತಿಯ ಮನಸ್ಸಿನ ಒಳತೋಟಿಯನ್ನು ಹಲವು ಹೆಣ್ಣುಗಳ ಪಾಡಾಗಿ ಕವಿ ಗುರುತಿಸಿದ್ದಾರೆ.

'ನಾವು ಜನ್ಮವೆತ್ತುತ್ತಲೇ ಇದ್ದೇವೆ
ಅಮೃತಮತಿಯರಾಗಿ
ನಿನ್ನಂಥವನ ಗದ್ದುಗೆಯ ರಾಣಿಯರಾಗಿ
ಅವನು ಬದಗನಾಗಿ
ನಮಗುತ್ತರವಾಗಿ'[27] (ಅಮೃತಮತಿ ಸ್ವಗತ)

ಪ್ರತಿಭಾ ಅವರು ಗಂಡು ಹೆಣ್ಣಿನ ಪ್ರೇಮವನ್ನು ತಮ್ಮದೇ ರೀತಿಯಲ್ಲಿ ವ್ಯಾಖ್ಯಾನಿಸುತ್ತಾರೆ. ಪ್ರೇಮದಲ್ಲಿ ಹೆಣ್ಣು ತನ್ನ ಪ್ರೇಮವನ್ನು ವರ್ಣಿಸಿದರೆ, ಗಂಡು ತನ್ನ ಪ್ರೇಮಿಯನ್ನು ವರ್ಣಿಸುತ್ತಾನೆ ಅಂದರೆ ತನ್ನ ಹೆಣ್ಣಿನ ದೇಹವನ್ನು ಎಂದು ಗಂಡಿನ ಪ್ರೇಮ ಸಿದ್ಧಾಂತದ ಹಿಂದಿರುವ ಸ್ವಾರ್ಥದ ವಾಸ್ತವಿಕತೆಯನ್ನು ಹೇಳುತ್ತಾರೆ. ಹೀಗೆ ಪ್ರತಿಭಾ ಅವರು ಎಲ್ಲವನ್ನೂ ಮೂರ್ತರೂಪದಲ್ಲಿಯೇ ಶೋಧನೆಗೊಳಪಡಿಸುತ್ತಾರೆ.

ಎಂ.ಆರ್.ಕಮಲ ಅವರೂ ಪ್ರತಿಭಾ ಅವರ ಸಮಕಾಲೀನ ಕವಿಗಳಲ್ಲಿ ಒಬ್ಬರು. ಅವರ 'ಜಾಣೆ' ಕವನ ಸಂಕಲನದ ಮುಖ್ಯ ಕವಿತೆಗಳಲ್ಲಿ 'ಕಾಡದಿರು ಕವಿತೆ' ಕೂಡ ಒಂದೆನ್ನಬಹುದು.

'ಆದರೂ ವಂದನೆಗಳು ನಿನಗೆ
ನಾಯಿ ನರಿಗಳ ಕಿರುಚಾಟದಲ್ಲೂ
ದೂರದ ಹಕ್ಕಿಯ ಹಾಡು ಕೇಳಿಸಿದ್ದಕ್ಕೆ;
ಕಂಬನಿಯಲ್ಲೂ ಸುಖದ ಬನಿ
ಕಾಣಲು ಕಲಿಸಿದ್ದಕ್ಕೆ,
ದಿಕ್ಕೆಟ್ಟವಳಲ್ಲಿ ಧೀಶಕ್ತಿ ಮೂಡಿಸಿದ್ದಕ್ಕೆ'.[28] (ಕಾಡದಿರು ಕವಿತೆ)

ಎಂದು ಈ ಕವಿತೆಯಲ್ಲಿ ತನ್ನ ನೋವುಗಳನ್ನು ಹಿಂದೆ ಸರಿಸಿ, ಸಮಾಧಾನ ನೀಡುವ ಎಂತಹ ದುಃಖದಲ್ಲಿಯೂ ತನ್ನನ್ನು ಧೃತಿಗೆಡದಂತೆ ಕಾಯುವ ಗೆಳತಿಯಂತೆ ಎಂದು ಕವಿತೆಯನ್ನು ವಿವರಿಸಿದ್ದಾರೆ.

ಕಮಲ ಅವರ '"ರಿಪಬ್ಲಿಕ್ ನರ್ಸಿಂಗ್ ಹೋಂ" ಲೇಬರ್ ವಾರ್ಡ್', ಎಂಬ ಕವಿತೆ ಮಹಿಳಾ ಕವಿಗಳಲ್ಲಿಯೂ ಅಪರೂಪವಾಗಿ ಕಂಡು ಬರುವ ಹೆಣ್ಣಿನ ಹೆರಿಗೆಯ ಸಂದರ್ಭವನ್ನು ವರ್ಣಿಸುವ ಕವಿತೆ. ಹೆರುವ ನೋವಿನ ಬಗೆಗೆ ತನ್ನ ಅಮ್ಮ, ಡಾಕ್ಟರ್ ಅತ್ತಿಗೆಯ ಮಾತುಗಳು ಸಾಂತ್ವನ ಹೇಳುವ ರೀತಿಯನ್ನು ಬಹಳ ಅರ್ಥಪೂರ್ಣವಾಗಿ ಹೇಳಿದ್ದಾರೆ. ಕೊನೆಗೆ, ತಾನು ಜನ್ಮ ನೀಡಿದ ಹೆಣ್ಣು ಮಗುವಿಗೆ,

'ಮಗೂ, ಹೌದು ಹೆಣ್ಣೆಂದರೆ ನೋವು ನುಂಗಬೇಕು
ಬಿಕ್ಕದೆ ಮುಕ್ಕಬೇಕು
ಆದರೂ, ಜೀವಸೃಷ್ಟಿಯ ಹರ್ಷ
ಈ ಸ್ಪರ್ಶ ಗಂಡಿಗೆಲ್ಲಿ ದಕ್ಕಬೇಕು!'[29]

ಹೀಗೆ ಹೆಣ್ಣಿನ ಅನನ್ಯತೆಯ ಬಗೆಗೆ ಹೆಮ್ಮೆಯ ದನಿಯಲ್ಲಿ ಹೇಳಿಕೊಂಡಿದ್ದಾರೆ.

ಪ್ರತಿಭಾ ಅವರ ಕವಿತೆಗಳಲ್ಲಿ ಹೀಗೆ ಹೆಣ್ಣಿನ ಅನನ್ಯತೆಯನ್ನು ಎತ್ತಿ ಹಿಡಿಯುವ ಕವಿತೆಗಳು ಸಾಕಷ್ಟಿವೆಯಾದರೂ 'ಹೆಣ್ಣು ಮತ್ತು ರಕ್ತ' ಕವಿತೆ ಎಲ್ಲ ಸಂಬಂಧಗಳು ಹೆಣ್ಣು ಹಾಗೂ ಅವಳ ಜೀವನದ ಮುಖ್ಯ ಘಟ್ಟಗಳನ್ನು ಅವಲಂಬಿಸಿವೆ ಎಂಬುದನ್ನು ಸಮರ್ಥವಾಗಿ ಸೂಚಿಸುತ್ತದೆ.

'ಆಮೇಲೆ
ಸ್ರಾವ ನಿಲ್ಲುವುದೂ ದೊಡ್ಡ ವಿಷಯ
ನಿಂತಿದೆ ಅದರ ಮೇಲೆ ಮನೆತನಗಳು
ಉರುಳಿವೆ ಸಾಮ್ರಾಜ್ಯಗಳು,
ಭೀಕರ ಕದನಗಳಿಗೆ ಕಾರಣವಾಗಿ
ಕೆಲವೊಮ್ಮೆ ಹಾರಿವೆ ಪ್ರಾಣಗಳು'[30]

ಪ್ರತಿಭಾ ಅವರ ಕಾವ್ಯ ವ್ಯಂಗ್ಯ ವಿಡಂಬನೆಯ ದನಿಯಲ್ಲಿದ್ದರೆ, ಕಮಲ ಅವರ ಕವಿತೆಗಳು ಗಂಭೀರವಾಗಿ ಗಂಡು ಹೆಣ್ಣಿನ ಸಂಬಂಧಗಳಲ್ಲಿರುವ ದುರಂತವನ್ನು ಗುರುತಿಸುತ್ತವೆ.

ಎಷ್ಟೋ ಸಂತಸದ ನಡುವೆ ಹುತ್ತಗಟ್ಟುತ್ತವೆ
ದುಃಖ, ಭಯ, ಚೀತ್ಕಾರಗಳು
ಸಾವಂಥ ಸಂಕಟಗಳು
ಹಗಲು ಖಾಲಿ ಆಗಸದಲಿ
ರಣಗುಡುತ್ತದೆ ಬಿಸಿಲು
ದೆವ್ವಗತ್ತಲ ನಿಟ್ಟುಸಿರ ರಾತ್ರಿಗಳು
ನೀಳವಾಗುತ್ತವೆ'[31] (ಇನ್ನೊಮ್ಮೆ ಚೈತ್ರ)

ಎಂದು ದುಃಖದ ಗಳಿಗೆಗಳನ್ನು ನೆನೆಯುವ ಇವರು ಕೊನೆಗೆ ಆಶಾವಾದವನ್ನು ವ್ಯಕ್ತಪಡಿಸುತ್ತಾರೆ:

'ಮಳೆಯಾಗಿ ಈ ಬದುಕ ನೆಲಕೆ ತಂದವನೆ
ಒಡಲೊಳಗೆ ಜೀವ ತಂತಿ ಮೀಟಿದವನೆ
ಪ್ರಸವ ವೇದನೆಯಲಿ ಹೊರಳಿ, ನರಳಿ
ಅರಳಿ ಜೀವ ತಳೆಯುವ ಚೈತ್ರ
ಮತ್ತೊಮ್ಮೆ ನಿನಗೆ,
ಕಣ್ಣಾಲಿಗಳಲಿ ನಿರೀಕ್ಷೆಯ ದೀಪ ಹಚ್ಚಿ ಕಾಯುತ್ತಿದ್ದೇನೆ'[32]

ಸ. ಉಷಾರವರು ಸಹ ಸಮಕಾಲೀನ ಮಹಿಳಾ ಕವಿಗಳಲ್ಲಿ ಒಬ್ಬರು 'ತೊಗಲುಗೊಂಬೆಯ ಆತ್ಮಕಥೆ' ಅವರ ಪ್ರಥಮ ಕವನ ಸಂಕಲನ. 'ತೊಗಲುಗೊಂಬೆಯ ಆತ್ಮಕಥೆ' ಕವಿತೆಯಲ್ಲಿ, ಹೆಣ್ಣು ಪುರುಷನು ಆಡಿಸುವ ತೊಗಲುಗೊಂಬೆಯ ಹಾಗೆ ಬದುಕಿರುವುದನ್ನು,

'ಎರವಲೆದೆ ಮುಖವಾಡ
ಹುಸಿಬಣ್ಣದುಡುಗೆಯಲಿ
ರಂಗ ಪ್ರವೇಶ
ಪ್ರಾಣಸೂತ್ರಗಳ ಪರರಿಗಿತ್ತು
ಗೊಂಬೆಯಾಟ ಪರದೆ ಬೀಳುವುದಿನ್ನು ಬಹುದೂರ'[33]

ಎಂದು ವರ್ಣಿಸುತ್ತಾರೆ. ಹೆಣ್ಣು, ಪುರುಷ ಪ್ರಧಾನ ವ್ಯವಸ್ಥೆ ನಿರ್ಮಿಸಿರುವ ಚಿಂತನೆಗಳನ್ನು ಮನಸ್ಸಿನಲ್ಲಿ ತುಂಬಿಕೊಂಡು, ಅದೇ ಸರಿಯಾದದ್ದು ಎಂದು ಭಾವಿಸಿ ಬೆಳೆಯುತ್ತಾಳೆ. ಆಡಿಸುವ ಅಧಿಕಾರದ ಸೂತ್ರಗಳನ್ನು ಅವರಿಗೆ ಕೊಟ್ಟು ಗೊಂಬೆಯ ಹಾಗೆ ಕುಣಿಸಿದಂತೆ ಕುಣಿಯುವ ಪರಿ ಅವಳದ್ದಾಗಿರುವುದನ್ನು 'ತೊಗಲುಗೊಂಬೆ'ಯ ಪ್ರತೀಕ ಸಮರ್ಥವಾಗಿ ಪ್ರತಿನಿಧಿಸುತ್ತದೆ.

'ಹವಳ ಹಾರಿದ ಹೊತ್ತು' ಎಂಬುದು ಸ.ಉಷಾರ ಇತ್ತೀಚಿನ ಕವನಸಂಕಲನಗಳಲ್ಲಿ ಒಂದಾಗಿದೆ. ಈ ಸಂಕಲನಕ್ಕೆ ಮುನ್ನುಡಿ ಬರೆದಿರುವ ಕವಿ ಎಚ್.ಎನ್. ಶಿವಪ್ರಕಾಶ್‌ರವರು 'ಈ ಸಂಕಲನದ ಕವಿತೆಗಳಲ್ಲಿ ಸ್ತ್ರೀ ಮೂಲ ಅನುಭವದ ನಿರ್ಮಿತಿ ನಡೆಯುವುದು ಸಂಕುಚಿತವಾದ ಲೈಂಗಿಕತೆಯ ಪಾತಳಿಯ ಮೇಲಲ್ಲ. ಗಂಡು ಓದುಗರ ಮೈ ಜುಮ್ಮೆನ್ನಿಸಿ ಸುಲಭ ಯಶಸ್ಸನ್ನು ಗಳಿಸಿಕೊಳ್ಳುವ ಅನುಕೂಲವನ್ನು ಇಲ್ಲಿನ ಕವಿತೆಗಳು ಪೂರ್ತಿಯಾಗಿ ಬಿಟ್ಟುಕೊಟ್ಟಿವೆ'[34] ಎಂದು ಹೇಳುತ್ತಾರೆ. ಮುಂದುವರಿದು, 'ತನ್ನ ಹೊಟ್ಟೆಯಲ್ಲಿ ಮಗುವಿದೆಯೆಂದು ಸಾಬೀತುಪಡಿಸುವ ಅಗತ್ಯ ಯಾವ ಭಾವಿ ತಾಯಿಗೂ ಇರುವುದಿಲ್ಲ. ತನ್ನ ದೇಹದಲ್ಲಿ ಉಸಿರಿರುವುದು ಅವಳ ಮಟ್ಟಿಗೆ ಅದೆಷ್ಟು ಸಹಜ ಸತ್ಯವೊ ಆಕೆಗೆ ತನ್ನ ಹೆಣ್ತನವೂ ಅಷ್ಟೇ ಸರಳ ಸತ್ಯವಾಗಿರುವುದರಿಂದ ಅದನ್ನು ಅಂಡರ್‌ಲೈನ್ ಮಾಡಿ ತೋರಿಸುವ ಜರೂರಿ ಇರುವುದಿಲ್ಲ. ಹೀಗೆ ಸ್ತ್ರೀ ಮೂಲ ಸೃಜನಾತ್ಮಕತೆಯ ಸಹಜತೆಯ ಬಗೆಗೆ ಮೆಲುದನಿಯ ಆತ್ಮವಿಶ್ವಾಸವುಳ್ಳವರೇ, ಸ.ಉಷಾ ಅವರ ಹಾಗೆ ಗಾಳಿ ಗಂಟಲಿಲ್ಲದ ಕವಿತೆಯನ್ನು ಬರೆಯಬಲ್ಲರು'[35] ಎಂದು ಬರೆದಿದ್ದಾರೆ. ಈ ಮಾತುಗಳು ಮಹಿಳಾ ಕವಿಗಳಲ್ಲಿ ಕೆಲವರು ಜೋರುದನಿಯಲ್ಲಿ ತನ್ನ ಹೆಣ್ತನದ ಬಗ್ಗೆ ಮಾತನಾಡುವುದನ್ನು ಟೀಕಿಸುತ್ತಾ ಸ.ಉಷಾರ ಮಾದರಿಯ ಕವಿಗಳನ್ನು ಮೆಚ್ಚುತ್ತಾರೆ.

ಇಲ್ಲಿ ಸ್ತ್ರೀಮೂಲ ಅನುಭವಗಳನ್ನು ನಿರ್ಮಿಸುವಾಗ ಲೈಂಗಿಕ ನೆಲೆಯಲ್ಲಿ ಚಿಂತಿಸಿ ಕವಿತೆ ಬರೆಯುವುದು ಸಂಕುಚಿತತೆಯನ್ನು ಸೂಚಿಸುತ್ತದೆ ಎಂಬ ಮಾತುಗಳನ್ನು ಗಮನಿಸಿದರೆ ಇದು ಅಷ್ಟು ಸರಿಯಲ್ಲವೆನಿಸುತ್ತದೆ. ಬದುಕಿನ ಮೂಲಭೂತ ಅಗತ್ಯಗಳಲ್ಲಿ ಗಂಡು-ಹೆಣ್ಣುಗಳಿಬ್ಬರಿಗೂ ಸಮಾನವಾಗಿ ಮುಖ್ಯವಾಗಿರುವ ಈ ಅಂಶವನ್ನು ಕುರಿತು,

ಇದನ್ನೇ ಮುಖ್ಯವಾಗಿಸಿಕೊಂಡು ಕವಿತೆ ಬರೆದರೆ ಅದೂ ಒಂದು ಮಾದರಿಯ ಸೃಜನಾತ್ಮಕತೆಯಾಗಿ ಕಾಣಬಹುದೇ ಹೊರತು ಸಂಕುಚಿತತೆ ಎಂದು ಭಾವಿಸಬಹುದೇ? ಎಂಬ ಪ್ರಶ್ನೆ ಮೂಡುತ್ತದೆ. ಈ ಪ್ರಶ್ನೆಗೆ ಉತ್ತರವನ್ನು ಪ್ರತಿಭಾ ಅವರ ಕಾವ್ಯದಲ್ಲಿಯೇ ಕಂಡುಕೊಳ್ಳಬಹುದೆನಿಸುತ್ತದೆ. ಹೆಣ್ಣು-ಗಂಡುಗಳ ಸಂಬಂಧದ ಎಲ್ಲಾ ನೆಲೆಗಳೂ ಹೆಚ್ಚೂ ಕಡಿಮೆ ಲೈಂಗಿಕ ನೆಲೆಯಲ್ಲಿಯೇ ಇಲ್ಲಿ ಚಿಂತನೆಗೊಳಪಡುತ್ತವೆ.

ಸ. ಉಷಾರ 'ಹವಳ ಹಾರಿದ ಹೊತ್ತು' ಸಂಕಲನದ ಕವಿತೆಗಳಲ್ಲಿ 'ರುರು ಪ್ರಮದಾ ಪ್ರೀತಿ' ಕವಿತೆ ಗಂಡು ಹೆಣ್ಣುಗಳ ನಡುವಿನ ಪ್ರೀತಿಯನ್ನು ತೋರುತ್ತದೆ. ಪುರಾಣದ ಪಾತ್ರಗಳಾದ ರುರು ಮತ್ತು ಪ್ರಮದಾ ಪ್ರೇಮಿಗಳು, ಪ್ರೇಯಸಿ ಹಾವು ಕಚ್ಚಿ ಸತ್ತಾಗ ಪ್ರೇಮಿಯಾದ ರುರು ತನ್ನ ಅರ್ಧ ಆಯುಷ್ಯವನ್ನು ಕೊಟ್ಟು ಬದುಕಿಸಿಕೊಳ್ಳುತ್ತಾನೆ. ಹೀಗೆಯೇ ಪ್ರೀತಿಗಿರುವ ಬೇರೆ ಸಾಧ್ಯತೆಯನ್ನು ಸೂಚಿಸುವ ಕವಿತೆ 'ಹವಳ ಹಾರಿದ ಹೊತ್ತು' ಎಂಬುದು.

'ನೀನು ಬರಿ ಹವಳವಲ್ಲ
ನಾನು ಬರಿ ಸಾಲ್ಮನ್ ಅಲ್ಲ
ಹಾರು ನನ್ನೊಡನೆ
ಈ ಅನಂತ ದಿಗಂತದಲ್ಲಿ
ನಾನೂ ತಲೆಯಾನಿಸುತ್ತೇನೆ
ರೆಕ್ಕೆ ಸೋತಾಗ ನಿನ್ನ ಹವಳ ವಕ್ಷದಲ್ಲಿ
ಬೆಳೆಯಲಿ ಹವಳ ಕುಮಾರರು
ಸಾಲ್ಮನ್ ಕನ್ನಿಕೆಯರು
ನನ್ನ ನಿನ್ನ ಆಸರೆಯಲಿ'[36]

ಎಂದು ಪುರಾಣಕ್ಕೆ ಗಂಟು ಬೀಳದೆ ಹೊಸತನಕ್ಕೆ ಹಾತೊರೆಯುವ ಎರಡು ಮನಸ್ಸುಗಳು ಪರಸ್ಪರ ಆಸರೆಯಾಗಿ ನಿಂತು ಬಾಳುವ ಪ್ರಮಾಣ ಮಾಡಿ ಪ್ರಯಾಣ ಬೆಳೆಸುವ ರೀತಿ ಇಲ್ಲಿ ಕಾಣುತ್ತದೆ.

ಹೆಣ್ಣಿನ ಅನನ್ಯತೆಯನ್ನು ಸೂಚಿಸುವ 'ಅನನ್ಯಭೂಮಿ' ಕವಿತೆ ಸಹ ಈ ಸಂಕಲನದ ಮುಖ್ಯ ಕವಿತೆಯೆನಿಸುತ್ತದೆ. ಸೂರ್ಯನನ್ನು ಎಲ್ಲ ಜೀವಕ್ರಿಯೆಗಳಿಗೂ ಮೂಲ ಕಾರಣ ಎಂದು ಗುರುತಿಸಲಾಗುತ್ತದೆ. ಆದರೆ ಸೂರ್ಯನಂತಹವರು ಈ ವಿಶ್ವದಲ್ಲಿ ಅಸಂಖ್ಯಾತರಿದ್ದಾರೆ. ಆದರೆ 'ಭೂಮಿ' ಒಂದೇ ಎನ್ನುತ್ತಾರೆ ಕವಿ. ಭೂಮಿಯ ಗೆಲುವು ಎಂತಹದೆಂಬುದನ್ನು

'ಕ್ಷಮಿಸು ಸೂರ್ಯ
ನಿನ್ನೊಳಗನಂತ ಶಕ್ತಿ ಇದೆ.
ಮೊಳೆವ ಬೀಜಗಳನದು ಸುಟ್ಟು ಹಾಕದ ಹಾಗೆ
ಗಾಳಿ ಸೆರಗ ಮುಚ್ಚಿ
ತೇಜೋಬಿಂದು ಭ್ರೂಣವಾಗಿ
ಮೊಗ್ಗಾಗಿ ಹೂವಾಗಿ
ರೂಪಿಸಿ ಕಾವ
ತಾಯೊಡಲೆ ಭೂಮಿ
ಅನನ್ಯ ಭೂಮಿ
ಅಹಂಕಾರ ನಿನ್ನದು
ಗೆಲುವು ಅವಳದು'[37]

ಎಂಬ ಸಾಲುಗಳಲ್ಲಿ ಪ್ರತಿಪಾದಿಸುತ್ತಾರೆ.

ಪ್ರತಿಭಾ ಅವರ ಕವನಗಳ ತಾತ್ಪರ್ಯ ಸಹ ಸ. ಉಷಾರ 'ಹವಳ ಕನ್ನಿಕೆ ಮತ್ತು ಸಾಲ್ಮನ್' ಪ್ರತಿಪಾದಿಸುವ ಗಂಡು ಕೇವಲ ಗಂಡಲ್ಲ, ಹೆಣ್ಣು ಕೇವಲ ಹೆಣ್ಣಲ್ಲ, ಇಬ್ಬರೂ ಪರಸ್ಪರರ ಸಮ್ಮಿಶ್ರಣವೆಂಬುದೇ ಆಗಿದೆ ಎನ್ನಬಹುದು. ಆದರೆ ಅಭಿವ್ಯಕ್ತಿಯಲ್ಲಿ, ಪ್ರತಿಭಾ ಅವರು ಭಾಷೆಯನ್ನು ನಿರ್ಭಿಡೆಯಿಂದ, ವ್ಯಂಗ್ಯ, ವಿಡಂಬನೆಗಳ ರೂಪದಲ್ಲಿ ಬಳಸುತ್ತಾರೆ ಎನ್ನಬಹುದು.

ಕೆ. ಷರೀಫಾ ಅವರು ಹೆಂಗಸರ ಬದುಕಿನ ಬಗೆಗೆ ಹಾಗೂ ಹಲವು ತಾರತಮ್ಯಗಳು ಸಮಾಜದಲ್ಲಿ ಸ್ಥಾನ ಪಡೆದಿರುವುದರ ಬಗೆಗೆ ಪ್ರತಿಭಟನೆಯ ಸ್ವರೂಪದ ಕವಿತೆಗಳನ್ನು ಬರೆದಿದ್ದಾರೆ. 'ಪಾಂಚಾಲಿ' ಕವನ ಸಂಕಲನದಲ್ಲಿ 'ಮೂಳೆಗಳೇ ಬನ್ನಿ', 'ಬಾಲ್ಯ ವಿವಾಹ', 'ಜನರ ಹತ್ತಿರ ಬನ್ನಿ', 'ಅಡವಿಟ್ಟ ಸ್ವಾತಂತ್ರ್ಯ' ಮುಂತಾದ ಕವಿತೆಗಳು ಶೋಷಿತರ ಪರವಾದ ದನಿಯನ್ನು, ರಾಜಕೀಯ ಸಂಗತಿಗಳನ್ನು ಕುರಿತು ತಮ್ಮ ವೈಚಾರಿಕ ನಿಲುವನ್ನು ಕವಿತೆಯ ರೂಪದಲ್ಲಿ ನಮ್ಮ ಮುಂದಿಡುತ್ತಾರೆ.

'ಮುಮ್ತಾಜಳ ಮಹಲು' ಕವನ ಸಂಕಲನದ 'ಪ್ರಶ್ನಿಸಲಿಲ್ಲವೇಕೆ' ಕವಿತೆ, ನಮ್ಮ ಪುರಾಣಸ್ತ್ರೀಯರಾದ ಚಂದ್ರಮತಿ, ಸೀತೆ, ದ್ರೌಪದಿ, ಅಹಲ್ಯೆ ಮುಂತಾದವರು ತಮ್ಮ ಗಂಡಂದಿರು ಯಾವ ರೀತಿಯಲ್ಲಿ ನಡೆಸಿಕೊಂಡರೋ ಅದನ್ನೇ ಒಪ್ಪಿ ನಡೆದುದನ್ನು ಪ್ರತಿಭಟಿಸುತ್ತಾ ಅವರು ಪ್ರಶ್ನಿಸುವ ಗೋಜಿಗೇ ಹೋಗದಿದುದರ ಬಗೆಗೆ ಕಿಡಿಕಾರುತ್ತಾರೆ.

'ತಿಕ್ಕಲು ಮುನಿಯ
ಬಲವನ್ನು ತೋರಿಸಲು
ಕಲ್ಲಾದ ಅಹಲ್ಯೆಯಂತೆ
ಮೂಕರಾಗಿ ಶಾಪ
ಸಹಿಸಿದಿರಲೇ ಕೆಳದಿಯರೇ
ತಿರುಗಿ ನಿಂತು ನೀವೊಮ್ಮೆ
ಅವರ ಅಖಂಡ ಪೌರುಷತ್ವವನ್ನು
ಪ್ರಶ್ನಿಸಲಿಲ್ಲವೇಕೆ?'[38]

ಎಂದು ಕೇಳುತ್ತಾರೆ.

ಪ್ರತಿಭಾ ಅವರು ಹೀಗೆ ನೇರವಾಗಿ ಇಂತಹ ಪುರಾಣ ಸ್ತ್ರೀಯರನ್ನು ತರಾಟೆಗೆ ತೆಗೆದುಕೊಳ್ಳದೆ ವರ್ತಮಾನದಲ್ಲಿಟ್ಟು ಅವರ ನಡವಳಿಕೆಗಳನ್ನು ವ್ಯಂಗ್ಯಕ್ಕೊಳಪಡಿಸುತ್ತಾರೆ. ಇತರ ಕವಿಗಳಂತೆ ಸಾಮಾಜಿಕ ಕಳಕಳಿಯಿರುವ ಕವಿತೆಗಳನ್ನು ಮುಖ್ಯವಾಗಿಸಿಕೊಳ್ಳದೇ ಹೋದರೂ 'ರಕ್ತಪಾತದ ಕವನಗಳು', 'ದಿಯುಗ', 'ಯುಗಾದಿ', 'ನರಮೇಧ' ಇಂತಹವು ಅಪರೂಪವಾಗಿ ಲೋಕದ ವಿದ್ಯಮಾನಗಳಿಗೆ ತೆರೆದುಕೊಂಡಿರುವ ಕವಿತೆಗಳಾಗಿ ಕಾಣುತ್ತವೆ.

ಸಮಕಾಲೀನ ಮಹಿಳಾ ಕಾವ್ಯದಲ್ಲಿ ನಾವು ಗುರುತಿಸಬಹುದಾದ ಅಂಶವೆಂದರೆ ಒಬ್ಬೊಬ್ಬ ಕವಿಯೂ ತನ್ನದೇ ಆದ ರೀತಿಯಲ್ಲಿ ಅಭಿವ್ಯಕ್ತಿಸಿರುವುದು. ಆದರೆ ಒಟ್ಟು ಮಹಿಳಾ ಕಾವ್ಯದ ಅಭಿವ್ಯಕ್ತಿ ಕ್ರಮದ ಲಕ್ಷಣವನ್ನು ಜಿ.ಎಸ್.ಅಮೂರರು 'ಮಹಿಳಾ ಕಾವ್ಯ ಪ್ರಬುದ್ಧತೆ ಪಡೆದದ್ದು ನವ್ಯದ ಆಗಮನದ ನಂತರವೇ. ಆದುದರಿಂದ ಸಹಜವಾಗಿ ಅದು ನವ್ಯ ರಚನಾ ಕ್ರಿಯೆಗಳನ್ನು ಹಾಗೂ ವಿಧಾನಗಳನ್ನು ಸ್ವೀಕರಿಸಿತು. ನವ್ಯಕಾವ್ಯದಲ್ಲಿ ಎದ್ದು ಕಾಣುವ ಮುಕ್ತ ಛಂದಸ್ಸು, ಲಯಾನುಸಾರಿ ಆಕೃತಿಗಳು ಹಾಗೂ ಆಡುಮಾತಿನ ಪ್ರಯೋಗ ಮಹಿಳಾ ಕಾವ್ಯದ ಲಕ್ಷಣಗಳಾದವು'[39] ಎಂದು ಗುರುತಿಸಿದ್ದಾರೆ.

## ಅಡಿಟಿಪ್ಪಣಿ:


1. ಮುಕ್ತಾಯಕ್ಕ ಎಚ್.ಎಸ್., ನೀವು ಕಾಣಿರೆ, ನೀವು ಕಾಣಿರೆ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು,1996, ಪುಟ 22.
2. ಮುಕ್ತಾಯಕ್ಕ ಎಚ್.ಎಸ್., ನಲವತ್ತು ಗಜಲುಗಳು, ಶಿಲ್ಪಾ ಪ್ರಕಾಶನ, ಗದಗ, ಮೊದಲ ಆವೃತ್ತಿ 2002, ಪುಟ 21.
3. ಅದೇ. ಪುಟ 75
4. ಬಿ.ಸಿ. ರಾಮಚಂದ್ರಶರ್ಮ, ನೀವು ಕಾಣಿರೆ ನೀವು ಕಾಣಿರೆ (ಮುನ್ನುಡಿ), ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, 1996, ಪುಟ 6.
5. ಪ್ರತಿಭಾ ನಂದಕುಮಾರ್, ಮುನ್ನುಡಿ ಬೆನ್ನುಡಿಗಳ ನಡುವೆ, ಮಹಿಳಾ ಸಾಹಿತ್ಯಿಕ ಪ್ರಕಾಶನ, ಹುಬ್ಬಳ್ಳಿ, 2006 ಪುಟ 395.
6. ಮುಕ್ತಾಯಕ್ಕ ಎಚ್.ಎಸ್., ಮೂವತ್ತೈದು ಗಜ಼ಲುಗಳು, ಸಿವಿಜಿ ಪಬ್ಲಿಕೇಶನ್ಸ್, ಬೆಂಗಳೂರು, ಪ್ರಥಮ ಮುದ್ರಣ 2004, ಪುಟ 13.
7. ಹೇಮಾ ಪಟ್ಟಣ ಶೆಟ್ಟಿ, ಕಣ್ಣುಗಳಲಿ ಕನಸು ತುಂಬಿ, ಅನನ್ಯ ಪ್ರಕಾಶನ, ಧಾರವಾಡ, 1993, ಪುಟ 30.
8. ಪ್ರತಿಭಾ ನಂದಕುಮಾರ್, ಪೂರ್ವೋಕ್ತ, ಪುಟ 73.
9. ಹೇಮಾ ಪಟ್ಟಣಶೆಟ್ಟಿ, ಪೂರ್ವೋಕ್ತ, ಪುಟ 56.
10. ಅದೇ.
11. ಅದೇ.
12. ಅದೇ. ಪುಟ 27
13. ಅದೇ.
14. ಪ್ರತಿಭಾ ನಂದಕುಮಾರ್, ಪೂರ್ವೋಕ್ತ, ಪುಟ 371.
15. ಅದೇ.
16. ಹೇಮಾಪಟ್ಟಣಶೆಟ್ಟಿ, ಪೂರ್ವೋಕ್ತ, ಪುಟ 23
17. ಶೈಲಜಾ ಉಡಚಣ; ಕಾಲ ದೂರವಿಲ್ಲ, ಚೇತನ ಪ್ರಕಾಶನ, ಗುಲ್ಬರ್ಗ:2002, ಪುಟ 3.
18. ಅದೇ. ಪುಟ 60
19. ಶೈಲಜಾ ಉಡಚಣ, ನನ್ನಂಥವರು, ಮಹಿಳಾ ಸಾಹಿತ್ಯಿಕ ಪ್ರಕಾಶನ, ಹುಬ್ಬಳ್ಳಿ, 1995 ಪುಟ 1.

20. ಅದೇ. ಪುಟ 38
21. ಪ್ರತಿಭಾ ನಂದಕುಮಾರ್, ಪೂರ್ವೋಕ್ತ ಪುಟ 457.
22. ವೈದೇಹಿ, ಬಿಂದು ಬಿಂದಿಗೆ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, 1990 ಪುಟ 33.
23. ಅದೇ. ಪುಟ 39
24. ಅದೇ ಪುಟ 18
25. ಪ್ರತಿಭಾ ನಂದಕುಮಾರ್, ಪೂರ್ವೋಕ್ತ, ಪುಟ 330.
26. ಎಚ್.ಎಲ್. ಪುಷ್ಪ, ಅಮೃತಮತಿ ಸ್ವಗತ, ಅನ್ವೇಷಣೆ ಪ್ರಕಾಶನ, ಬೆಂಗಳೂರು, 1992, ಪುಟ 14.
27. ಅದೇ. ಪುಟ 1
28. ಎಂ.ಆರ್. ಕಮಲ, ಜಾಣೆ, ಕಲ್ಯಾಣಿ ಪ್ರಕಾಶನ, ಬೆಂಗಳೂರು, 1992, ಪುಟ 24
29. ಅದೇ. ಪುಟ 16
30. ಪ್ರತಿಭಾ ನಂದಕುಮಾರ್, ಪೂರ್ವೋಕ್ತ, ಪುಟ 336.
31. ಎಂ.ಆರ್. ಕಮಲ, ಪೂರ್ವೋಕ್ತ, ಪುಟ 11.
32. ಅದೇ.
33. ಸಂ. ನರಹಳ್ಳಿ ಬಾಲಸುಬ್ರಹ್ಮಣ್ಯ, ವೀಣಾಶಾಂತೇಶ್ವರ, ಕನ್ನಡ ಸಾಹಿತ್ಯ ಪರಿಷತ್ತು, 1990, ಪುಟ 9.
34. ಎಚ್.ಎಸ್. ಶಿವಪ್ರಕಾಶ್, ಹವಳ ಹಾರಿದ ಹೊತ್ತು (ಮುನ್ನುಡಿ), ಅಭಿನವ ಪ್ರಕಾಶನ, ಬೆಂಗಳೂರು,2005, ಪುಟ 3.
35. ಅದೇ.
36. ಸ. ಉಷಾ, ಹವಳ ಹಾರಿದ ಹೊತ್ತು, ಅಭಿನವ ಪ್ರಕಾಶನ, ಬೆಂಗಳೂರು, 2005, ಪುಟ 17.
37. ಅದೇ. ಪುಟ 46.
38. ಕೆ. ಷರೀಫಾ, ಮುಮ್ತಾಜಳ ಮಹಲು, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು, 2001, ಪುಟ 57.
39. ಜಿ.ಎಸ್. ಆಮೂರ, ಅಮೃತವಾಹಿನಿ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, 2000, ಪುಟ 43.

# ಸಮಾರೋಪ

'ಸ್ತ್ರೀವಾದದ ಹಿನ್ನೆಲೆಯಲ್ಲಿ ಪ್ರತಿಭಾ ನಂದಕುಮಾರ್‌ರವರ ಕಾವ್ಯ' ಎಂಬ ವಿಷಯದ ಅಧ್ಯಯನ ನಡೆಸಿರುವ ಈ ನಿಬಂಧದಲ್ಲಿ ಆರು ಅಧ್ಯಾಯಗಳಿವೆ. ಈ ಅಧ್ಯಾಯಗಳಲ್ಲಿ ಮುಖ್ಯವಾಗಿ ಸ್ತ್ರೀವಾದದ ಆಶಯಗಳ ಹಿನ್ನೆಲೆಯಲ್ಲಿ ಪ್ರತಿಭಾ ಅವರ ಕಾವ್ಯದ ಸ್ವರೂಪ ಮತ್ತು ಅಭಿವ್ಯಕ್ತಿ ವಿಧಾನವನ್ನು ವಿಶ್ಲೇಷಿಸಲಾಗಿದೆ.

ಮೊದಲ ಅಧ್ಯಾಯದಲ್ಲಿ ಸ್ತ್ರೀವಾದ ಹುಟ್ಟಿ ಬಂದ ಬಗೆ ಹೇಗೆ ಎಂಬುದನ್ನು, ಅದು ನಂತರ ವಿವಿಧ ಪ್ರಸ್ಥಾನಗಳ ಮೂಲಕ ಹೇಗೆ ಬೆಳೆದು ಬಂದಿದೆಯೆಂಬುದನ್ನು ವಿವರಿಸಿಕೊಳ್ಳಲಾಗಿದೆ. ಸ್ತ್ರೀವಾದೀ ಯೋಚನಾಕ್ರಮವು ಏಕರೂಪತೆಯಿಂದಿರದೆ ಅದು ಆಯಾ ಸಮಾಜದ ಪರಿಸರಕ್ಕನುಗುಣವಾಗಿ ಅಭಿವ್ಯಕ್ತಿಸುವವರ ಅನುಭವವನ್ನು ಅವಲಂಬಿಸಿರುತ್ತದೆ ಎಂಬುದನ್ನು ಇಲ್ಲಿ ಗಮನಿಸಲಾಗಿದೆ.

ಕನ್ನಡ ಮಹಿಳಾ ಕಾವ್ಯವು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಕಾಣಿಸಿಕೊಂಡಿರುವ ಬಗೆಯನ್ನು ಎರಡನೆಯ ಅಧ್ಯಾಯದಲ್ಲಿ ಗುರುತಿಸಲು ಯತ್ನಿಸಲಾಗಿದೆ. ಎಂಭತ್ತರ ದಶಕದಲ್ಲಿ ಮಹಿಳಾ ಕಾವ್ಯವು ಅತ್ಯಂತ ಹೆಚ್ಚಿನ ವೇಗವನ್ನು ಪಡೆದುಕೊಳ್ಳಲು ಕಾರಣವೇನು ಎಂಬುದನ್ನು ಹಾಗೂ ಈ ಮಹಿಳಾ ಕಾವ್ಯದ ಸತ್ವವನ್ನು ಗುರುತಿಸಲು ವಿಫಲವಾದ ಪುರುಷ ಪ್ರಧಾನ ಸಾಹಿತ್ಯ ವಿಮರ್ಶೆಯ ವೈಫಲ್ಯವನ್ನು ಗುರುತಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

ಮೂರು ಮತ್ತು ನಾಲ್ಕನೇ ಅಧ್ಯಾಯಗಳಲ್ಲಿ ಪ್ರತಿಭಾ ಅವರ ಕಾವ್ಯದಲ್ಲಿ ಗುರುತಿಸಬಹುದಾದ ಕೆಲವು ವೈಶಿಷ್ಟ್ಯಗಳಿಂದ ಕೂಡಿದ ಕವಿತೆಗಳಲ್ಲಿ ಪ್ರಾತಿನಿಧಿಕವಾದ ಕೆಲವನ್ನು ಚರ್ಚಿಸಿ, ಒಟ್ಟು ಕಾವ್ಯದ ಸ್ವರೂಪವನ್ನು ವಿವರಿಸಲಾಗಿದೆ. ಹಾಗೂ ಸ್ತ್ರೀವಾದದ ಹಿನ್ನೆಲೆಯಲ್ಲಿ ಪ್ರತಿಭಾ ಅವರ ಕವಿತೆಗಳಲ್ಲಿ ಕಂಡುಬರುವ ಸ್ತ್ರೀವಾದೀ ಚಹರೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಐದನೆಯ ಅಧ್ಯಾಯವು ಪ್ರತಿಭಾ ಅವರ ಕಾವ್ಯದ ಅಭಿವ್ಯಕ್ತಿ ವಿಧಾನವನ್ನು ಕುರಿತಾದುದಾಗಿದೆ. ಅವರ ಕಾವ್ಯದ ಭಾಷೆ, ಹೇಗೆ ಹೆಣ್ಣಿನ ಬದುಕಿನ ಹಲವು ಹತ್ತು ಆಯಾಮಗಳನ್ನು ತೆರೆದಿಡಲು ಅನುಕೂಲಕರವಾಗಿ ರೂಪಿಸಿಕೊಂಡಿರುವಂಥದಾಗಿದೆ ಎಂಬುದನ್ನು ಗುರುತಿಸಲು ಯತ್ನಿಸಲಾಗಿದೆ. ಕ್ರೌರ್ಯ ಹಾಗೂ ಹಿಂಸೆಯನ್ನು ಅಭಿವ್ಯಕ್ತಿಸುವಾಗ ಅವರು ಪ್ರಾಣಿ ಪ್ರತೀಕಗಳನ್ನು ಬಳಸಿ ಹೆಣ್ಣಿನ ವಾಸ್ತವ ಬದುಕನ್ನು ಸಮರ್ಥವಾಗಿ ಅಭಿವ್ಯಕ್ತಿಸಿರುವುದನ್ನು ಕಾಣಬಹುದು.

ಆರನೆಯ ಅಧ್ಯಾಯನದಲ್ಲಿ ಸಮಕಾಲೀನ ಮಹಿಳಾ ಕಾವ್ಯದಲ್ಲಿ ನಾನು ಗಮನಿಸಿದ ಕವಿಗಳ ಕವನಸಂಕಲನಗಳ ಅಧ್ಯಯನದ ಮೂಲಕ ಸಮಕಾಲೀನ ಮಹಿಳಾ ಕಾವ್ಯದಲ್ಲಿ ಪ್ರತಿಭಾ ಕಾವ್ಯದ ವೈಶಿಷ್ಟ್ಯ, ಹೋಲಿಕೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಒಟ್ಟು ಪ್ರತಿಭಾ ಅವರ ಕಾವ್ಯವು ಕನ್ನಡ ಕಾವ್ಯದಲ್ಲಿ ವಿಶಿಷ್ಟವಾಗಿ ನಿಲ್ಲುವುದನ್ನು ಕಾಣಬಹುದು. ಹಿಂಜರಿಕೆ ಹಾಗೂ ಸಾಮಾಜಿಕ ಅಡ್ಡಿ ಆತಂಕಗಳ ಕಾರಣದಿಂದ ಯಾವ ಮಹಿಳಾ ಕವಿಯೂ ಅಭಿವ್ಯಕ್ತಿಸದೇ ಇದ್ದ ಹೆಣ್ಣಿನ ಲೋಕವನ್ನು ನಿರ್ಭಿಡೆಯಿಂದ ಅಭಿವ್ಯಕ್ತಿಸಿದ ಕವಿಯಾಗಿ ಪ್ರತಿಭಾ ಕಂಡುಬರುತ್ತಾರೆ.

## ಆಕರ ಗ್ರಂಥಸೂಚಿ:-


1. ಆಶಾದೇವಿ ಎಂ.ಎಸ್., 'ಮರೆಯಬಾರದ ಕೊಡಗಿನ ಗೌರಮ್ಮ', 'ಅಚಲ' ಮಾಸಪತ್ರಿಕೆ. ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ ಪ್ರಕಾಶನ, ಸಂಚಿಕೆ: ಮೇ 2007.
2. ಆಮೂರ ಜಿ.ಎಸ್., ಅಮೃತವಾಹಿನಿ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, 2000.
3. ಉಷಾ ಸ., ಹವಳ ಹಾರಿದ ಹೊತ್ತು, ಅಭಿನವ ಪ್ರಕಾಶನ, ಬೆಂಗಳೂರು, 2005.
4. ಕೇಶವಶರ್ಮ ಕೆ., ಕ್ರಿಯೆ ಪ್ರತಿಕ್ರಿಯೆ, ಚಿಂತನ ಕೂಟ ಪ್ರಕಾಶನ, ಬೆಂಗಳೂರು, 1998.
5. ಕೇಶವಶರ್ಮ ಕೆ., ಲೇಖನ: 'ಬೇರೊಂದು ಕೋನದಲ್ಲಿ ಚರಿತ್ರೆ', ಮಯೂರ ಮಾಸಪತ್ರಿಕೆ, ಸಂಚಿಕೆ, ಡಿಸೆಂಬರ್ 2006.
6. ಕಮಲ ಎಂ.ಆರ್., 'ಜಾಣೆ' ಕಲ್ಯಾಣಿ ಪ್ರಕಾಶನ, ಬೆಂಗಳೂರು, 1992.
7. ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ, ಸ್ತ್ರೀವಾದಿ ಸಾಹಿತ್ಯ ವಿಮರ್ಶೆ, ಕ್ರೈಸ್ಟ್ ಕಾಲೇಜು, ಕನ್ನಡ ಸಂಘ, ಬೆಂಗಳೂರು, 1994.
8. ಸಂ. ನರಹಳ್ಳಿ ಬಾಲಸುಬ್ರಹ್ಮಣ್ಯ, ವೀಣಾಶಾಂತೇಶ್ವರ, ಹೊಸಹೆಜ್ಜೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1990.
9. ಸಂ. ನೇಮಿಚಂದ್ರ, ಬೆಳಗೆರೆ ಜಾನಕಮ್ಮ, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು, 1980.
10. ಪುಷ್ಪ ಹೆಚ್.ಎಲ್., 'ಅಮೃತಮತಿಯ ಸ್ವಗತ' ಅನ್ವೇಷಣೆ ಪ್ರಕಾಶನ, ಬೆಂಗಳೂರು, 1992.
11. ಪ್ರತಿಭಾ ನಂದಕುಮಾರ್, 'ಮುನ್ನುಡಿ ಬೆನ್ನುಡಿಗಳ ನಡುವೆ', ಮಹಿಳಾ ಸಾಹಿತ್ಯಿಕ ಪ್ರಕಾಶನ, ನವನಗರ, ಹುಬ್ಬಳ್ಳಿ, 2006.
12. ಪ್ರತಿಭಾ ನಂದಕುಮಾರ್, ಆಹಾ, ಪುರುಷಾಕಾರಂ!, ನೆಲಮನೆ ಪ್ರಕಾಶನ, ಶ್ರೀರಂಗಪಟ್ಟಣ, 2000.
13. ಮುಕ್ತಾಯಕ್ಕ ಎಚ್.ಎಸ್., ನೀವು ಕಾಣಿರೆ ನಾವು ಕಾಣಿರೆ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, 1996.

14. ಮುಕ್ತಾಯಕ್ಕ ಎಚ್.ಎಸ್., ನಲವತ್ತು ಗಝಲುಗಳು, ಶಿಲ್ಪಾ ಪ್ರಕಾಶನ, ಗದಗ ಮೊದಲ ಆವೃತ್ತಿ 2002.
15. ಮುಕ್ತಾಯಕ್ಕ ಎಚ್.ಎಸ್., ಮೂವತ್ತೈದು ಗಝಲುಗಳು, ಸಿವಿಜಿ ಪಬ್ಲಿಕೇಶನ್ಸ್, ಬೆಂಗಳೂರು, 2004.
16. ರಾಮಚಂದ್ರನ್ ಸಿ.ಎನ್., ಸಾಹಿತ್ಯ ವಿಮರ್ಶೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಮೂರನೇ ಆವೃತ್ತಿ (ಪರಿಷ್ಕೃತ) 2000.
17. ಸಂ. ಲಂಕೇಶ್ ಪಿ., ಅಕ್ಷರ ಹೊಸ ಕಾವ್ಯ, ಪತ್ರಿಕಾ ಪ್ರಕಾಶನ, ಬೆಂಗಳೂರು, ಎರಡನೆಯ ಪರಿಷ್ಕೃತ ಮುದ್ರಣ, 1993.
18. ವಿಜಯಾ ದಬ್ಬೆ, ಮಹಿಳೆ ಸಾಹಿತ್ಯ ಸಮಾಜ, ರಚನಾ ಪ್ರಕಾಶನ, ಮೈಸೂರು, 1989.
19. ವೈದೇಹಿ, ಬಿಂದು ಬಿಂದಿಗೆ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, 1990.
20. ಶೈಲಜಾ ಉಡಚಣ, ಕಾಲ ದೂರವಿಲ್ಲ, ಚೇತನ ಪ್ರಕಾಶನ, ಗುಲ್ಬರ್ಗ, 2002.
21. ಶೈಲಜಾ ಉಡಚಣ, ನನ್ನಂಥವರು, ಮಹಿಳಾ ಸಾಹಿತ್ಯಿಕ ಪ್ರಕಾಶನ, ಹುಬ್ಬಳ್ಳಿ, 1995.
22. ಶ್ರೀಮತಿ ಎಚ್.ಎಸ್. ಸ್ತ್ರೀವಾದ, ಪ್ರಸಾರಾಂಗ, ಹಂಪಿ ಕನ್ನಡ ವಿಶ್ವವಿದ್ಯಾಲಯ, 2003.
23. ಸಂ. ಶ್ರೀಮತಿ ಎಚ್.ಎಸ್., ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2006.
24. ಷರೀಫಾ ಕೆ. ಮುಮ್ತಾಜಳ ಮಹಲು, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು, 2001.
25. ಸಂಚಯ ತ್ರೈಮಾಸಿಕ ತ್ರೈಮಾಸಿಕ ಪತ್ರಿಕೆ, ಸಂಪುಟ 15, ಸಂಚಿಕೆ 3 (72). ಬೆಂಗಳೂರು, ನವೆಂಬರ್ 2006.
26. ಸುಮಿತ್ರಾಬಾಯಿ ಬಿ.ಎನ್. ವಿಚಯ, ಇಳಾ ಪ್ರಕಾಶನ, ಬೆಂಗಳೂರು, 1995.
27. ಹೇಮಾ ಪಟ್ಟಣಶೆಟ್ಟಿ, ಕಣ್ಣುಗಳಲಿ ಕನಸು ತುಂಬಿ, ಅನನ್ಯ ಪ್ರಕಾಶನ, ಧಾರವಾಡ, 1993.

